ದಯಾನಂದ ವರ್ಮಾ

# ಜೋಕೆ! ಬರವಣಿಗೆ ನಿಮ್ಮನ್ನು ಬಯಲಿಗೆಳೆದೀತು

- ನಮ್ಮ ಅಭಿರುಚಿ: ನಮ್ಮ ಉದ್ಯೋಗ
- ಮಾತು ಕೈಕೊಟ್ಟಾಗ
- ಬರವಣಿಗೆಗೊಂದು ಮೈಕ್ರಾಸ್ಕೋಪ್
- ...ಮ್ಮ ತುಂಬ 'ಬಿಜಿ'ಯೆ ??
- ...ರ ಶಕ್ತಿ ಕಡಮೆಯೆ ?
- ...ತರಿಲ್ಲವೆ ನಿಮಗೆ ?
- ಸ್ವಲ್ಪ ನಿಧಾನ! ಕೋಪ ಬೇಡ!
- ಸೇಡು ತೀರಿಸಿಕೊಳ್ಳಲೇಬೇಕೆ?



ಲಕ್ಷ್ಮೀನಾರಾಯಣ ಅರೋರಾ

ದಯಾನಂದ ವರ್ಮಾ

# ಜೋಕೆ!
# ಬರವಣಿಗೆ ನಿಮ್ಮನ್ನು ಬಯಲಿಗೆಳೆದೀತು

(ವ್ಯಕ್ತಿತ್ವ ವಿಕಾಸ ಮನೋವಿಜ್ಞಾನ ಪ್ರಬಂಧಗಳು)

ಅನುವಾದ

ಲಕ್ಷ್ಮೀನಾರಾಯಣ ಅರೋರಾ



ಸ್ವಾತಿ ಪ್ರಕಾಶನ
ಕುವೆಂಪುನಗರ, ಮೈಸೂರು

*Jōke! Baravaṇige Nimmannu Bayaligeḷedītu* — Kannada translation by Lakshminarayan Aurora of the book 'Manasik Saphalata Kaise' originally in Hindi written by Dayanand Varma. Published by Swati Prakashana, 'Anupama' 1136, Lalitadri First cross, Kuvempunagar, Mysore 570 023 : Pages pp. xii + 83.







ಕಲೆ : ಕೆ. ಮುರಳೀಧರ

ಮೊದಲ ಮುದ್ರಣ : ಡಿಸೆಂಬರ್ 1987



ಸ್ವಾತಿ ಪ್ರಕಾಶನ
'ಅನುಪಮ' 1136, ಲಲಿತಾದ್ರಿ ಮೊದಲನೇ ಕ್ರಾಸ್
ಕುವೆಂಪುನಗರ, ಮೈಸೂರು 570 023

ಗ್ರಂಥಾಲಯ ವರ್ಗೀಕರಣ : ಡೂಯಿ ದಶಮಾನ ಪದ್ಧತಿ 137
ಕೋಲನ್ ಪದ್ಧತಿ S 7:78

ಮುದ್ರಣ :
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್
13ನೇ ಕ್ರಾಸ್, ಜಯನಗರ, ಮೈಸೂರು 570 014

## ಮುನ್ನುಡಿ

ನನ್ನನ್ನು ಭೇಟಿ ಮಾಡಲು ಅವರು ಫೋನಿನ ಮೂಲಕ ಮೊದಲೇ ಸಮಯ ನಿಗದಿಪಡಿಸಿಕೊಂಡರು. ಸಮಯಕ್ಕೆ ಸರಿಯಾಗಿ ಹಾಜರಾದರು.

ಅವರ ಕಣ್ಣಿನಲ್ಲಿ ಭಯ ಮನೆಮಾಡಿತ್ತು. ಆತಂಕದ ಧ್ವನಿಯಲ್ಲಿ ಅವರು ಅಂದರು—"ಸ್ವಲ್ಪ ಕಾಲದಿಂದ ನನಗೆ ಚಿತ್ರ ವಿಚಿತ್ರವಾದ ಸದ್ದುಗಳು ಕೇಳಿಬರುತ್ತಿವೆ. ಏಕೆಂದು ಗೊತ್ತಾಗುತ್ತಿಲ್ಲ. ಏನು ಮಾಡಲಿ ಹೇಳಿ ?"

ಯಾರಾದರೂ ಮನೋವಿಜ್ಞಾನಿಯನ್ನು ಭೇಟಿ ಮಾಡಲು ನಾನು ಅವರಿಗೆ ಸಲಹೆ ಮಾಡಿದೆ.

"ಈ ಮನೋವಿಜ್ಞಾನಿ ಎಂದರೇನು ?" ಅವರು ತುಂಬ ಭೋಳೆ ಧ್ವನಿಯಲ್ಲಿ ಕೇಳಿದರು. ನಾನು ಅವರ ಮುಖ ನೋಡುತ್ತಲೇ ಕುಳಿತುಬಿಟ್ಟೆ. ಆ ಮನುಷ್ಯ ಇಪ್ಪತ್ತನೆಯ ಶತಮಾನದ ಗಾಳಿ ಕುಡಿಯುತ್ತಿದ್ದಾರೆ. ಆದರೆ ಅವರಿಗೆ ಮನೋವಿಜ್ಞಾನಿ ಎಂದರೆ ಯಾರೆಂದು ಗೊತ್ತಿಲ್ಲ !

ವಾಸ್ತವವಾಗಿ ಅವರು ನನ್ನ ಬಳಿಗೆ ಬಂದಿದ್ದು ಯಾರಾದರೂ ಸಾಧು ಸಂನ್ಯಾಸಿಗಳ ವಿಳಾಸ ತಿಳಿದುಕೊಳ್ಳುವುದಕ್ಕೋಸ್ಕರ. ಪ್ರಾಯಃ ಅಂಥವರು ತಮಗೆ ಹಿಡಿದ ಭೂತವನ್ನು ಬಿಡಿಸಬಲ್ಲರೇನೊ ಅಂತ ಅವರ ನಂಬಿಕೆ. ಆದರೆ ಇಂಥ 'ಭೂತ'ವನ್ನು ಕೇವಲ ಮನೋವಿಜ್ಞಾನಿಯಷ್ಟೆ ಉಚ್ಚಾಟಿಸಬಲ್ಲನೆಂಬುದು ನನಗೆ ಗೊತ್ತಿತ್ತು.

'ಮನೋವಿಜ್ಞಾನ' ಎಂಬ ಪದ ಯಾರಿಗೇ ಆಗಲಿ ಗೊತ್ತಿಲ್ಲದಿರಬಹುದು. ಆದರೆ ಇದರ ಬಗೆಗಿನ ತಿಳಿವಳಿಕೆ ಹೊಸದೇನಲ್ಲ. ಮನುಷ್ಯ ತನ್ನ ಬಗೆಗೆ ಸ್ವಲ್ಪವಾದರೂ ಆಲೋಚನೆ ಮಾಡಿದ ದಿನವೇ ಪ್ರಾಯಃ ಇದರ ಮೊದಲ ಪಾಠಕ್ಕೆ ನಾಂದಿ ಹಾಡಿದಂತಾಯಿತು. ತಾನು ತನ್ನ ವಿಷಯವಾಗಿ ಯಾವ ಬಗೆಯಲ್ಲಿ ಆಲೋಚನೆ ಮಾಡುತ್ತಿದ್ದನೋ ಅದೇ ಬಗೆಯಲ್ಲಿ ಇನ್ನೊಬ್ಬರ ವಿಚಾರವಾಗಿಯೂ ಯೋಚಿಸಲಾರಂಭಿಸಿದ ದಿನದಿಂದ ಇದರ ಬೆಳವಣಿಗೆ ಆಗಲಾರಂಭಿಸಿತು.

ಯಶಸ್ಸನ್ನು ಗಳಿಸಿಕೊಳ್ಳಬೇಕಾದರೆ ನಮ್ಮ ಬಗೆಗೆ ನಾವೇ ಯೋಚನೆ ಮಾಡುವುದು ತುಂಬ ಆವಶ್ಯಕ. ಒಂದುವೇಳೆ ಹೀಗೆ ಆಲೋಚಿಸುವುದು ಯಾವುದಾದರೂ ಉದ್ದೇಶವನ್ನು ಹೊಂದಿದ್ದರೆ ವಿಚಾರಮಾಡುವವನು ಪರಿಸ್ಥಿತಿಗೆ ತಕ್ಕಂತೆ ಯಶಸ್ವಿಯಾಗಿ ತನ್ನನ್ನು ತಾನು ಹೊಂದಿಸಿಕೊಳ್ಳಬಲ್ಲ.

ಈ ಸಂಕಲನದಲ್ಲಿರುವ ಪ್ರಬಂಧಗಳು ನಮ್ಮ ಬಗ್ಗೆ ನಾವು ಆಲೋಚಿಸುವ ನಿಟ್ಟಿನಲ್ಲಿ ಪ್ರೇರಣೆ ನೀಡುತ್ತವೆ. ಹಾಗೆ ಆಲೋಚಿಸಿ ನಮ್ಮ ಮಾನಸಿಕ ದೌರ್ಬಲ್ಯಗಳನ್ನು ಅರ್ಥಮಾಡಿಕೊಂಡು ನಮ್ಮನ್ನು ನೋಡಿ ನಾವೇ ಮುಂಗುಳ್ನಗುವಂತೆ ಅವು ಅವಕಾಶ ಮಾಡಿಕೊಡುತ್ತವೆ. ತೀರ ಕಡಿಮೆಯೆಂದರೂ ನಮ್ಮ ದೌರ್ಬಲ್ಯಗಳನ್ನು ಕುರಿತಂತೆ ಇತರರು ಪರಿಹಾಸ್ಯ ಮಾಡುವುದಕ್ಕಿಂತಲೂ ಇದು ಮೇಲಲ್ಲವೆ !

**ದಯಾನಂದ ವರ್ಮಾ**

## ಮೆಚ್ಚುಮಾತು

ನನ್ನ ಸಹೋದ್ಯೋಗಿ ಮಿತ್ರರಾದ ಶ್ರೀ ಲಕ್ಷ್ಮೀನಾರಾಯಣ 'ಅರೋರ' ಅವರು ತಾವು ಹಿಂದಿಯಿಂದ ಅನುವಾದಿಸಿದ ಶ್ರೀ ದಯಾನಂದ ವರ್ಮಾ ಅವರ 'ಮಾನಸಿಕ್ ಸಫಲತಾ ಕೈಸೆ ?' ಎಂಬ ಪ್ರಬಂಧ ಸಂಕಲನಕ್ಕೆ ನಾಲ್ಕು ಮಾತು ಬರೆದುಕೊಡಲು ಕೇಳಿದ್ದಾರೆ. ಆ ಕೆಲಸವನ್ನು ತುಂಬ ಸಂತೋಷದಿಂದ ಒಪ್ಪಿ ಕೊಂಡಿದೇನೆ. ಇದಕ್ಕೆ ಕಾರಣ ಎರಡು: ಒಂದು, ಪುಸ್ತಕ ಚೆನ್ನಾಗಿದೆ; ಇನ್ನೊಂದು, ಶ್ರೀ ಲಕ್ಷ್ಮೀನಾರಾಯಣ ನನಗೆ ಪ್ರಿಯರಾದವರು.

ತಮ್ಮ ಪ್ರಬಂಧಗಳನ್ನು ಶ್ರೀ ದಯಾನಂದ ವರ್ಮಾ 'ಮನೋವಿಜ್ಞಾನ ವಿಷಯುಕ' ಎಂದು ಕರೆದುಕೊಂಡಿದ್ದಾರೆ. ಸಂಕಲನದ ಎಲ್ಲ ಪ್ರಬಂಧಗಳೂ ಮನೋವಿಜ್ಞಾನವನ್ನು ಆಧರಿಸಿದವು. ಆದರೆ ಎಲ್ಲೂ ವಿಜ್ಞಾನದ ಭಾರವಿಲ್ಲ. ಇವು ವಿಜ್ಞಾನ ವಿಷಯವಾದ ಪ್ರಬಂಧಗಳೆಂದು ಮೊದಲ ನೋಟಕ್ಕೆ ಅನ್ನಿಸು ವುದೂ ಇಲ್ಲ! ಯೋಚಿಸತೊಡಗಿದಾಗ ಅವುಗಳ ಹಿಂದಿನ ಮನೋವಿಜ್ಞಾನ ಪ್ರಪಂಚದ ವ್ಯಾಪ್ತಿಯೂ, ವಿಶ್ಲೇಷಣೆಯ ಚಾತುರ್ಯವೂ ಕಣ್ಣಿಗೆ ಕಟ್ಟುತ್ತವೆ. ಮನೋದೇಹಿಯಾದ ಮನುಷ್ಯ ತನ್ನ ಮನಸ್ಸಿನ ಕಡೆಗೆ ಗಮನವನ್ನೇ ಕೊಡುವು ದಿಲ್ಲ ! ದೇಹದ ಬಗೆಗಿನ ಆಸಕ್ತಿ, ಎಚ್ಚರ ಮನಸ್ಸಿನ ಬಗೆಗೆ ಕಾಣುವುದಿಲ್ಲ. ಆದರೆ ಅವನ ಪ್ರತಿಯೊಂದು ದೈಹಿಕ ಕ್ರಿಯೆಯ ಹಿಂದೆಯೂ ಮನಸ್ಸೆಂಬುದು ಇದ್ದೇ ಇರುತ್ತದೆ. ಮನಸ್ಸಿಲ್ಲದೆ ಮಾಡುವ ಯಾವ ಕೆಲಸವೂ, ಸಫಲವಾಗುವುದಿರಲಿ, ನಡೆಯುವುದೇ ಇಲ್ಲ! ತೀರ ಸಾಮಾನ್ಯವೆನ್ನಿಸುವ ನಮ್ಮ ದೈನಂದಿನ ಚಟುವಟಿಕೆ ಗಳ ಹಿಂದೆ ಸುಪ್ತಚಿತ್ತದ ಕೈವಾಡ ಹೇಗಿರುತ್ತದೆಂಬುದನ್ನು ಪ್ರಸ್ತುತ ಸಂಕಲನದ ಎಂಟೂ ಪ್ರಬಂಧಗಳು ನಿರೂಪಿಸುತ್ತವೆ ; ನಾವು ಲಕ್ಷಿಸದೆ ಹೋದ ಎಷ್ಟೋ ಸಂಗತಿಗಳು ಹೇಗೆ ನಮ್ಮನ್ನು ಆಳುತ್ತವೆಂಬುದನ್ನೂ ತೋರಿಸುತ್ತವೆ.

ಈ ಪ್ರಬಂಧಗಳ ಒಂದು ಆಕರ್ಷಣೆಯೆಂದರೆ ಅವುಗಳ ನಿರೂಪಣೆಯ ಸೊಗಸು. ಉದಾಹರಣೆಗೆ, ಮೊದಲ ಪ್ರಬಂಧದ ಆರಂಭದ ಕೆಲವು ಸಾಲುಗಳನ್ನೇ ನೋಡಬಹುದು : "ಇವರನ್ನು ಭೇಟಿಮಾಡಿ ! ಇವರು ಬ್ಯಾಂಕಿನಲ್ಲಿ ಗುಮಾ ಸ್ತರು. ವಯಸ್ಸು ಇಪ್ಪತ್ತಾರು ವರ್ಷ. ಆದರೆ ಬ್ಯಾಂಕಿನಲ್ಲಿ ಕೆಲಸದ ಮೇಲಿದ್ದಾಗ ಅರುವತ್ತು ವರ್ಷದ ಮುದುಕರಂತೆ ಇವರ ನಡಗೆ. ಸಣ್ಣ ಫೈಲನ್ನು ಮೇಲೆ ತ್ತಲೂ ಕಷ್ಟಪಟ್ಟು ಬಗ್ಗುತ್ತಾರೆ. ಭಾರ ಎತ್ತುವುದರಲ್ಲಿ ಪ್ರಪಂಚ ದಾಖಲೆ

ಯನ್ನು ಮುರಿಯುವುದಕ್ಕೆ ಹೊರಟಿದ್ದಾರೇನೊ ಎನ್ನುವಂತಿರುತ್ತದೆ ಇವರ ಭಂಗಿ. ಕೆಲಸ ಮಾಡಬೇಕಾದರೆ ಐವತ್ತು ಬಾರಿ ಗಡಿಯಾರದ ಮೇಲೆಯೆ ಇವರ ಕಣ್ಣು. ಸಂಜೆ ಕಚೇರಿಯ ವೇಳೆ ಮುಗಿಯುತ್ತಲೇ ಹೇಗೆ ಮನೆಯ ಕಡೆ ದೌಡಾಯಿಸುತ್ತಾರೆಂದರೆ ಇದುವರೆಗೆ ಜೈಲಿನಲ್ಲಿದ್ದರೇನೊ, ಈಗತಾನೆ ಬಿಡುಗಡೆಯಾಗಿದೆಯೇನೊ ಎನಿಸುತ್ತದೆ.''

ಇದನ್ನು ಓದುತ್ತಿದ್ದಂತೆಯೇ ನಾವು ಪ್ರಬಂಧದಲ್ಲಿ ಮುಳುಗಿ ಹೋಗುತ್ತೇವೆ. 'ನಮ್ಮ ಅಭಿರುಚಿ : ನಮ್ಮ ಉದ್ಯೋಗ' ಎಂಬ ಈ ಪ್ರಬಂಧ ನಮ್ಮ ಆಸಕ್ತಿಗೂ ಉದ್ಯೋಗಕ್ಕೂ ಇರುವ ಸಂಬಂಧವನ್ನು ಪರಿಶೀಲಿಸುತ್ತದೆ. ಅಭಿರುಚಿಗೆ ಅನುಗುಣವಾದ ಕೆಲಸ ದೊರೆಯದಿದ್ದಾಗ ಪರಿಸ್ಥಿತಿ ಏನಾಗುತ್ತದೆಂಬುದನ್ನು ಇಲ್ಲಿ ವಿವರಿಸಿದೆ. ಚಿಕ್ಕ ಮಕ್ಕಳಲ್ಲಾಗಲಿ, ಯುವಕರಲ್ಲಾಗಲಿ ಆಸಕ್ತಿ ಅಭಿರುಚಿಗಳು ಯಾವ ಬಗೆಯವಾಗಿರುತ್ತವೆಂಬುದರ ಕಡೆಗೆ ಯಾರೂ ಗಮನ ಕೊಡುವುದಿಲ್ಲ. ಅಭಿರುಚಿ ಇರುತ್ತದೋ ಇಲ್ಲವೋ ಮಕ್ಕಳು ಇಂಜನಿಯರಿಂಗ್ ಓದಬೇಕು ಮೆಡಿಸನ್ ಓದಬೇಕು ಎಂಬುದು ಎಲ್ಲ ತಂದೆತಾಯಿಗಳ ಅಪೇಕ್ಷೆ. ಒಂದು ಕೆಲಸ ತನಗೆ ಹಿಡಿಸುತ್ತದೆಯೋ ಇಲ್ಲವೋ, ಸಂಬಳ ಬರುವ ಯಾವುದಾದರೂ ಕೆಲಸ ಎಲ್ಲ ಯುವಕರಿಗೂ ಬೇಕು. ''ಪ್ರಪಂಚದಲ್ಲಿ ಸಂಬಳವೇ ಸರ್ವಸ್ವ, ಅಭಿರುಚಿಗೆ ಯಾವುದೇ ಮಹತ್ವ ಇಲ್ಲ ಎಂಬಂತಾಗಿಬಿಟ್ಟಿದೆ''—ಎಂದು ಲೇಖಕರು ಸಮರ್ಪಕವಾಗಿಯೇ ಹೇಳುತ್ತಾರೆ. ನಮ್ಮ ದೇಶದಲ್ಲಿ ತಜ್ಞರ ಕೊರತೆ ಇದೆ ಎಂದು ಹೇಳುತ್ತೇವೆ. ಆಸಕ್ತಿಯನ್ನು ಗಮನಕ್ಕೆ ತೆಗೆದುಕೊಳ್ಳದಿರುವುದೇ ಇದಕ್ಕೆ ಕಾರಣವೆಂದು ಸೋದಾಹರಣವಾಗಿ ಅವರು ಹೇಳಿದ್ದಾರೆ. ಅಭಿರುಚಿ, ಆಸಕ್ತಿ ಎಂದರೇನು ಎಂಬುದಕ್ಕೆ ಲೇಖಕರ ವಿವರಣೆ ಮನೋಜ್ಞವಾಗಿದೆ : ''ಯಾವ ಕೆಲಸ ಮಾಡುವಾಗ ನಮಗೆ ಸಮಯ ಕಳೆಯುವ ಪರಿವೆಯೆ ಇರುವುದಿಲ್ಲ, ಯಾವ ಕೆಲಸದಲ್ಲಿ ತೊಡಗಿದಾಗ ಆಯಾಸವೆಂಬುದೇ ನಮ್ಮ ಹತ್ತಿರ ಸುಳಿಯುವುದಿಲ್ಲ ಇಂಥ ಕೆಲಸವೇ ನಮ್ಮ ಅಭಿರುಚಿಗೆ ಒಗ್ಗುವ ಕೆಲಸ.'' ಅಂಥ ಕೆಲಸ, ಮಾಡುವವನಿಗೆ ಖುಷಿ ಕೊಡುತ್ತದೆ. ಅಂಥ ಕೆಲಸ ಕಷ್ಟಕರವಾಗಿದ್ದರೂ ಸುಖವಾದದ್ದು ಎಂಬ ಸಂತೋಷ ನೀಡುತ್ತದೆ.

ಮುಖ್ಯವಾದ ಪ್ರಶ್ನೆಯೆಂದರೆ, ಪ್ರತಿಯೊಬ್ಬರಿಗೂ ಅವರವರ ಅಭಿರುಚಿ ಅನುಗುಣವಾದ ಕೆಲಸ ದೊರೆಯುತ್ತದೆಯೆ? ಹಾಗೆ ದೊರೆಯುವುದು ಸಾಧ್ಯವೆ ಎಂಬುದು. ಅನ್ನ ಮುಖ್ಯವೆ ? ಅಭಿರುಚಿ ಮುಖ್ಯವೆ ? ಇವು ಯಾರಾದರು ಕೇಳಬಹುದಾದ ಪ್ರಶ್ನೆಗಳು. ಅದಕ್ಕೆ ಲೇಖಕರು ಹೇಳುತ್ತಾರೆ : ''ಬೇ

ಉಪಾಯ ಇಲ್ಲದಿದ್ದಲ್ಲಿ ಪಾಲಿಗೆ ಬಂದದ್ದೆ ಪಂಚಾಮೃತವೆಂದು ಹಿಡಿದ ಕೆಲಸದಲ್ಲಿ ಅಭಿರುಚಿಯನ್ನು ರೂಢಿಸಿಕೊಳ್ಳಬೇಕು.'' ಅದಿಲ್ಲದಿದ್ದರೆ ಬದುಕು ಸಹ್ಯವೆನ್ನಿಸು ವುದಿಲ್ಲ; ಕೆಲಸದಲ್ಲಿ ಸಂತೋಷವಿರುವುದಿಲ್ಲ. ಜೀವನದೊಡನೆ ಜಗಳವಾಡುತ್ತ ಇರಬೇಕಾಗುತ್ತದೆ. ಅನ್ನಕ್ಕಾಗಿ ಕೆಲಸ ಹಿಡಿದಿದ್ದರೆ ಕೆಲಸಕ್ಕೂ ಅನ್ನಹಾಕುವುದು ಕರ್ತವ್ಯವಾಗಿರುತ್ತದೆ.

ನಾನು ಈ ಮೊದಲ ಪ್ರಬಂಧವನ್ನು ಸ್ವಲ್ಪ ವಿವರವಾಗಿ ಪರಿಚಯಿಸುವು ದಕ್ಕೆ ಕಾರಣ, ಈ ಸಂಕಲನದ ಪ್ರಬಂಧಗಳ ಸಾಮಾನ್ಯ ಸ್ವರೂಪವನ್ನು ತಿಳಿಸು ವುದು. ನಮ್ಮ ಮಾತಿನಲ್ಲಿ ನಾವು ಅಷ್ಟಾಗಿ ಗಮನಿಸದ ಆಶ್ರಯಪದಗಳನ್ನು ಕುರಿತು ಒಂದು ಪ್ರಬಂಧ ಚರ್ಚಿಸುತ್ತದೆ. ಮಾತನಾಡುತ್ತಿರುವಾಗ ಆಲೋಚನೆಯ ಪ್ರವಾಹ ಎಡವಿದಾಗ, ಅಥವಾ ದಿಕ್ಕು ಕಾಣದಾದಾಗ, ಶಬ್ದಗಳು ಸರಿಯಾಗಿ ಕೂಡಿಕೊಳ್ಳದೆ ಹೋದಾಗ ನಮ್ಮ ನೆರವಿಗೆ ಬರುವ ಪದಗಳು ಆಶ್ರಯಪದಗಳು. ಅವುಗಳ ಹುಟ್ಟು ಬೆಳವಣಿಗೆಯನ್ನು ಸ್ಥೂಲವಾಗಿ, ಸಮರ್ಥವಾಗಿ, ಸೋದಾ ಹರಣವಾಗಿ ಇಲ್ಲಿ ನಿರೂಪಿಸಲಾಗಿದೆ. ಬರವಣಿಗೆ ನಮ್ಮ ಸ್ವಭಾವವನ್ನು ಹೇಗೆ ಬಿಂಬಿಸುತ್ತದೆಂಬುದು ಮತ್ತೊಂದು ಪ್ರಬಂಧದ ವಸ್ತು. ಇದರ ಒಟ್ಟಾರೆ ಫಲಿ ತಾಂಶ : ''ನೇರವಾದ ಸಾಲುಗಳು, ಸುಂದರವಾದ ಹೆಚ್ಚು ಸಣ್ಣಗಿರದ ಹೆಚ್ಚು ದಪ್ಪವಾಗಿರದ ಸ್ಪಷ್ಟ ಅಕ್ಷರಗಳು, ಸರಿಯಾದ ಕಾಗದದ ಮೇಲೆ ಸರಿಯಾದಷ್ಟು ಮಾರ್ಜಿನ್, ಸಂಕ್ಷಿಪ್ತವಾಗಿದ್ದರೂ ಸಂಪೂರ್ಣವಾಗಿ ಅರ್ಥವಾಗುವಂತಹ ಬರವ ಣಿಗೆ—ಇವುಗಳನ್ನು ಹೊಂದಿರುವ ವ್ಯಕ್ತಿ ಮಾನಸಿಕ ಹಾಗೂ ಶಾರೀರಿಕ ದೃಷ್ಟಿ ಯಿಂದ ಆರೋಗ್ಯವಂತನಾಗಿರುತ್ತಾನೆ ಅಂದುಕೊಳ್ಳಬಹುದು.''

ಎಷ್ಟೇ ಬಿಜಿಯಾಗಿದ್ದರೂ, ದೈನಂದಿನ ಕೆಲಸಕಾರ್ಯಗಳನ್ನು ಸುವ್ಯವಸ್ಥಿತ ವಾಗಿ ಸಕಾಲದಲ್ಲಿ ಮಾಡುವುದಕ್ಕೆ ಸೂತ್ರಗಳನ್ನು ಒದಗಿಸುವ ಪ್ರಬಂಧ— 'ಕಡಿಮೆ ಬಿಜಿಯಾಗಿದ್ದು ಹೆಚ್ಚು ಕೆಲಸ ಮಾಡಿ.' ಮುಗಿದು ಹೋದ ಕೆಲಸವನ್ನು ಮುಟ್ಟಬೇಡಿ; ಮುಂದೆ ಮಾಡಬೇಕಾದ ಕೆಲಸವನ್ನು ದೂರ ಇಡಿ; ಈಗಲೇ ಮಾಡ ಬೇಕಾದ ಕೆಲಸವನ್ನಷ್ಟೆ ಕೈಗೆತ್ತಿಕೊಳ್ಳಿ ಎಂಬುದು ಇದರ ಸಂದೇಶ. ಹಲವರಿಗೆ ಈ ವರ್ಗೀಕರಣವೇ ಕಷ್ಟವಾಗಬಹುದು !

ಒಂದು ಪ್ರಬಂಧದಲ್ಲಿ ನೆನಪಿನ ಶಕ್ತಿಗೆ ಸಂಬಂಧಿಸಿದ ಸಮಸ್ಯೆಗಳ ವಿಶ್ಲೇ ಷಣೆಯಿದೆ, ಸುವ್ಯವಸ್ಥಿತವಾಗಿ ಕೆಲಸ ಮಾಡಲು ಇರುವ ಸೂತ್ರಗಳು ಇಲ್ಲೂ ಉಪಯೋಗಕ್ಕೆ ಬರುತ್ತವೆ. ಜೊತೆಗೆ ಇನ್ನಷ್ಟು ಕಿವಿಮಾತುಗಳೂ ಇವೆ. ನಿಜ ವಾದ ಗೆಳೆಯರು ಯಾರು ಎಂಬುದನ್ನು ಮತ್ತೊಂದು ಪ್ರಬಂಧದಲ್ಲಿ ಚರ್ಚಿಸ

ಲಾಗಿದೆ. ಗೆಳೆತನದ ಅಗತ್ಯ, ಗೆಳೆತನದಿಂದಾಗುವ ನಿರಾಶೆ, ಗೆಳೆತನದ ಬೆಸುಗೆ, ಗೆಳೆತನ ಕಳಚಿಕೊಳ್ಳುವ ಬಗೆ—ಈ ಅಂಶಗಳನ್ನು ಇದರಲ್ಲಿ ವಿಶದವಾಗಿ ನಿರೂಪಿಸಲಾಗಿದೆ. ಕೋಪ ಮತ್ತು ಸೇಡು—ಕೊನೆಯ ಎರಡು ಪ್ರಬಂಧಗಳಲ್ಲಿ ಚರ್ಚಿತವಾದ ವಿಷಯಗಳು. ಕೋಪವನ್ನೂ ಒಂದು ಗುಣವನ್ನಾಗಿಸಿಕೊಳ್ಳುವ ಸಾಧ್ಯತೆಯನ್ನು ಮೊದಲಿನದು ಹೇಳುತ್ತದೆ. ಆವೇಶ ಮತ್ತು ಈರ್ಷ್ಯೆಗಳ ರೂಪತಾಳಿರುವ ಸೇಡಿನ ಪದರಗಳನ್ನು ಎರಡನೆಯದು ಬಿಚ್ಚಿಡುತ್ತದೆ. ಮಗುವನ್ನು ತಾಯಿ ಕೂಗಿದಾಗ, ಕೇಳಿಸಿದರೂ ಕೇಳಿಸದಂತಿರುವ ಮಗುವಿನ ಮನೋಭಾವದಲ್ಲಿ ಹೇಗೆ ಅಸಮಾಧಾನದ ಮೊಳಕೆ ಒಡೆಯುತ್ತಿರುತ್ತದೆ ಎಂಬುದನ್ನು, ಸೇಡಿನ ಬೆಳವಣಿಗೆಯ ಹಾದಿಯಲ್ಲಿ, ತುಂಬ ಸಮರ್ಪಕವಾಗಿ ವಿವೇಚಿಸಲಾಗಿದೆ. ಸೇಡಿನ ಒಳಿತು ಕೆಡಕುಗಳನ್ನು ಈ ಪ್ರಬಂಧದಲ್ಲಿ ಸಾಕಷ್ಟು ಪರಿಣಾಮಕಾರಿಯಾಗಿ ಹೇಳಲಾಗಿದೆ. "ಸೇಡಿನ ಕಿಚ್ಚಿಗೆ ಒಳಗಾದ ಮನುಷ್ಯ ಬೇರೆಯವರು ಎಳೆದಿರುವ ಗೀಟನ್ನು ಚಿಕ್ಕದು ಮಾಡಬೇಕಾದರೆ ಅದರ ಸ್ವಲ್ಪ ಭಾಗವನ್ನು ಅಳಿಸಿ ಹಾಕುವತ್ತಲೇ ಯೋಚಿಸುತ್ತಾನೆ. ಆದರೆ ಸ್ಪರ್ಧಾಕಾಂಕ್ಷಿಯಾದ ಮನುಷ್ಯ ಆ ಗೀಟಿನ ಪಕ್ಕದಲ್ಲಿ ತಾನೊಂದು ಉದ್ದವಾದ ಗೀಟನ್ನು ಎಳೆದು ಮೊದಲನೆಯದು ಚಿಕ್ಕದೆಂದು ಸಾಧಿಸಿ ತೋರಬಯಸುತ್ತಾನೆ." ಆಲೋಚನೆಗೆ ಎಂಥ ಸಾಮಗ್ರಿಯಿದೆ ಇಲ್ಲಿ !

ಶ್ರೀ ಲಕ್ಷ್ಮೀನಾರಾಯಣ ಅವರು ಅನುವಾದಿಸಿರುವ ಈ ಪ್ರಬಂಧಗಳನ್ನು ಓದಿ ನಾನು ಸಂತೋಷಪಟ್ಟಿದೇನೆ. ನನ್ನ ಸ್ವಭಾವ ಕೆಲವನ್ನು ಕುರಿತು ನಾನೇ ಆಲೋಚಿಸಿರ್ದೆನೆ! ಇವನ್ನು ಓದುವ ಯಾರಿಗಾದರೂ ಇದೇ ಅನುಭವವಾಗುತ್ತದೆಂದು ನಿರೀಕ್ಷಿಸಿದೇನೆ. ಮನೋವಿಜ್ಞಾನದ ಪಠ್ಯಪುಸ್ತಕಗಳನ್ನು ಓದಿ ನಮ್ಮನ್ನು ನಾವು ಪರೀಕ್ಷಿಸಿಕೊಳ್ಳುವುದು ವೈದ್ಯನ ರೀತಿ. ಶಾಸ್ತ್ರೀಯ ಆಧಾರದ ಇಂಥ ಲಘು ಪ್ರಬಂಧಗಳನ್ನು ಓದಿ ಯೋಚಿಸುವುದು ಸ್ನೇಹದ ರೀತಿ. ಮೊದಲನೆಯದು ಹೇಳಿ ಮಾಡಿಸುತ್ತದೆ: ಎರಡನೆಯದು ಹೇಳದೆ ಕಲಿಸುತ್ತದೆ. ಈ ಪ್ರಬಂಧಗಳ ಸ್ವಾರಸ್ಯ ಇರುವುದೇ ಇಲ್ಲಿ. ಇವು ಸುಲಭವಾಗಿ ಓದಿಸಿಕೊಳ್ಳುತ್ತವೆ ; ಯೋಚಿಸುವಂತೆ ಮಾಡುತ್ತವೆ. ಬರವಣಿಗೆಯ ಸಾರ್ಥಕತೆಗೆ ಇನ್ನೇನು ಬೇಕು ?

ಪುಸ್ತಕದ ಹೆಸರಿನ ಬಗೆಗೆ ಮಾತ್ರ ನನ್ನ ತಕರಾರಿದೆ. ಪುಸ್ತಕದ ಮೂಲ ಹೆಸರೇ ('ಮಾನಸಿಕ ಸಫಲತೆ ಹೇಗೆ?') ಹೆಚ್ಚು ಸಮರ್ಪಕವಾದುದೆಂದೂ, ಉಚಿತವಾದುದೆಂದೂ ನನ್ನ ಭಾವನೆ. 'ಜೋಕೆ ! ಬರವಣಿಗೆ ನಿಮ್ಮನ್ನು ಬಯಲಿಗೆಳೆದೀತು' ಎಂಬ ಒಂದು ಪ್ರಬಂಧದ ಪ್ರಸ್ತುತ ಹೆಸರು ಇಡೀ ಪುಸ್ತಕದ ವ್ಯಾಪ್ತಿಯನ್ನು ಹಿಡಿಯಲಾರದು. ಒಂದು ಪ್ರಬಂಧದ, ಒಂದು ಕಥೆಯ, ಒಂದು ಪದ್ಯದ

ಹೆಸರನ್ನು ಇಡೀ ಸಂಕಲನಕ್ಕೆ ಇಡುವುದೂ ಒಂದು ರೀತಿ, ಸರಿಯೆ. ಆದರೆ ಅದು ತಪ್ಪುಕಲ್ಪನೆಗೆ ಅವಕಾಶ ಕೊಡಬಾರದೆಂಬುದೂ, ಅಷ್ಟೇ ಸರಿ. ಒಂದು ವ್ಯಕ್ತಿತ್ವವನ್ನು ರೂಪಿಸುವ ಅಭಿರುಚಿ, ಮಾತು, ಬರವಣಿಗೆ, ಕೆಲಸ, ಸ್ಮರಣಶಕ್ತಿ, ಕೆಳೆ, ಕೋಪ ಮತ್ತು ಸೇಡಿನ ಭಾವನೆ—ಇಂಥ ಸಂಗತಿಗಳು ಮಾನಸಿಕ ಸೋಪಾನಗಳೇ ಹೌದು. ಈ ಸೋಪಾನಗಳನ್ನು ಒಬ್ಬ ಹೇಗೆ ಹತ್ತುತ್ತಾನೆ ಎಂಬುದರ ಮೇಲೆ ಅವನ ಯಶಸ್ಸು ನಿಲ್ಲುತ್ತದೆ. ಈ ಪುಟ್ಟ ಪುಸ್ತಕ ಈ ಯಶಸ್ಸಿನ ಕಡೆಗೆ ನಿಲ್ಲಿಸಿದ ಕೈಮರ. ಶೀರ್ಷಿಕೆ ಇದನ್ನು ಸೂಚಿಸುವಂತಿದ್ದರೆ ಇನ್ನೂ ಚೆನ್ನಾಗಿತ್ತೆಂಬುದು ನನ್ನ ಅಭಿಪ್ರಾಯ. ಆದರೆ ಇದರಿಂದ ಪುಸ್ತಕದ ಗುಣಕ್ಕೇನೂ ಕೊರತೆಯಿಲ್ಲ.

ಈ ಪುಸ್ತಕವನ್ನು ಕನ್ನಡಿಗರು ಸ್ವಾಗತಿಸುತ್ತಾರೆಂದು ನಾನು ನಂಬಿದೇನೆ. ಆ ಸ್ವಾಗತ ಶ್ರೀ ಲಕ್ಷ್ಮೀನಾರಾಯಣ ಅವರಿಗೆ ಸ್ಫೂರ್ತಿಯೂ ಶಕ್ತಿಯೂ ಆಗಿ, ಅವರಿಂದ ಹೆಚ್ಚಿನ ಕೆಲಸ ಆಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಈ ಪುಸ್ತಕಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ಕ್ರಿಸ್‌ಮಸ್, ೧೯೮೭
'ಗೋಧೂಳಿ', ಜಯಲಕ್ಷ್ಮೀಪುರಂ
ಮೈಸೂರು ೫೭೦ ೦೧೨

ಹಾ ಮಾ ನಾಯಕ

## ಎರಡು ನಿಮಿಷ . . .

ಮಾನ್ಯಮಿತ್ರರಾದ ಶ್ರೀ ದಯಾನಂದ ವರ್ಮಾ ಅವರ ಪ್ರಸಕ್ತ ಪ್ರಬಂಧ ಸಂಕಲನವನ್ನು ಮೊದಲಬಾರಿಗೆ ಓದಿದಾಗ ನನಗೆ ನಿಜಕ್ಕೂ ತುಂಬ ಸಂತೋಷ ವಾಯಿತು. ನಮ್ಮ ಅಭಿರುಚಿ ಮತ್ತು ಉದ್ಯೋಗ, ಮಾತುಗಾರಿಕೆ, ಬರವಣಿಗೆ, ಕಾರ್ಯದಕ್ಷತೆ, ನೆನಪಿನ ಶಕ್ತಿ, ಸ್ನೇಹಾಭಿಲಾಷೆ, ಸಿಟ್ಟು, ದ್ವೇಷ ಇವೇ ಮುಂತಾದ ಮೂಲಭೂತ ವಿಚಾರಗಳನ್ನು ಕುರಿತಂತೆ ಅವರು ತಿಳಿಯಾದ ಹಾಗೂ ಆಕರ್ಷಕ ವಾದ ಮಾತುಗಳಲ್ಲಿ ಮಾಡಿರುವ ನಿರೂಪಣೆ ವ್ಯಕ್ತಿತ್ವ ನಿರ್ಮಾಣದ ದೃಷ್ಟಿಯಿಂದ ಸಾಕಷ್ಟು ಮಹತ್ವಪೂರ್ಣವಾಗಬಲ್ಲದೆಂಬ ಭಾವನೆ ಮೂಡಿತು. ಇದು ಈ ಅನು ವಾದಕ್ಕೆ ಹಿನ್ನೆಲೆಯೊದಗಿಸಿದ ಪ್ರೇರಣೆ.

ಸನ್ಮಾನ್ಯ ವಿದ್ಯಾಗುರುಗಳಾದ ಪ್ರೊಫೆಸರ್ ಹಾ. ಮಾ. ನಾಯಕರು ಈ ಎಲ್ಲ ಪ್ರಬಂಧಗಳನ್ನು ಅವಲೋಕಿಸಿ ತುಂಬ ವಿಶ್ವಾಸದಿಂದ ಈ ಸಂಕಲನಕ್ಕೆ ಮೆಚ್ಚುಮಾತನ್ನು ಬರೆಯುವ ಕೃಪೆದೋರಿದ್ದಾರೆ. ತಮ್ಮ ಎಡೆಬಿಡದ ಅಧ್ಯಯನ ಹಾಗೂ ಬರವಣಿಗೆ ಕೆಲಸಗಳ ನಡುವೆ ಅವರು ಬಿಡುವು ಮಾಡಿಕೊಂಡು ಬರೆದು ಕೊಟ್ಟಿರುವ ನಾಲ್ಕು ಮಾತುಗಳಲ್ಲಿ ಎದ್ದುಕಾಣುವ ಸೂಕ್ಷ್ಮಾವಲೋಕನ ಮತ್ತು ಸಾರಗ್ರಾಹಿತ್ವ ಈ ಪ್ರಬಂಧಗಳ ಮೌಲ್ಯವನ್ನು ಹೆಚ್ಚಿಸುವುದರಲ್ಲಿ ಖಂಡಿತ ನೆರ ವಾಗಬಲ್ಲವು. ಅವರ ಶಿಷ್ಯವಾತ್ಸಲ್ಯಕ್ಕಾಗಿ ನಾನು ತುಂಬ ಕೃತಜ್ಞ. ಪ್ರಸಕ್ತ ಸಂಕಲನದ ಶೀರ್ಷಿಕೆಯ ಬಗೆಗೆ ಡಾ. ನಾಯಕರು ಮೊದಲ ನೋಟದಲ್ಲೇ ಆಕ್ಷೇಪ ವ್ಯಕ್ತಪಡಿಸಿದ್ದುಂಟು. ಎಲ್ಲ ಪ್ರಬಂಧಗಳ ಒಟ್ಟು ಸಾರವನ್ನು ಶೀರ್ಷಿಕೆ ಸೂಚಿಸ ಲಾರದೆಂಬುದು ಅವರ ಅಭಿಪ್ರಾಯವಾಗಿತ್ತು. ಅವರ ಆಶಯಕ್ಕಾಗಿ ನಾನು ಆಭಾರಿ. ಆದರೆ ಮೂಲಶೀರ್ಷಿಕೆಯ ಯಥಾನುವಾದ ತುಂಬ ಸಾಂಪ್ರದಾಯಿಕ ವಾದೀತೆಂಬ ಅನಿಸಿಕೆಯಿಂದ ಪ್ರಬಂಧವೊಂದರ ಹೆಸರನ್ನೇ ಪುಸ್ತಕಕ್ಕೆ ಇಡುವುದು ಆಕರ್ಷಕವಾಗಿರುತ್ತದೆಂದು ಭಾವಿಸಿದೆ.

ಈ ಪ್ರಬಂಧಗಳು 'ಪುಸ್ತಕ ಪ್ರಪಂಚ'ದಲ್ಲಿ ಕಳೆದ ಸುಮಾರು ಎರಡು ವರ್ಷಗಳಿಂದ ಕೆಲವಾರು ಸಂಚಿಕೆಗಳಲ್ಲಿ ಪ್ರಕಟಗೊಂಡಿವೆ. ಒಂದೊಂದು ಪ್ರಬಂಧ ವನ್ನು ತೆಗೆದುಕೊಂಡು ಹೋದಾಗಲೂ ಸಂಪಾದಕ ಮಂಡಳಿಯ ಮಾನ್ಯ ಸದಸ್ಯ ರಾದ ಶ್ರೀ ಜಿ. ಟಿ. ನಾರಾಯಣರಾಯರು ತೋರಿಸುತ್ತಿದ್ದ ಉತ್ಸಾಹ, ನೀಡು ತ್ತಿದ್ದ ಪ್ರೋತ್ಸಾಹಗಳನ್ನು ನಾನು ಎಂದಿಗೂ ಮರೆಯಲಾರೆ. ಅವರ ಅದಮ್ಯ

ಉತ್ಸಾಹಶೀಲತೆ, ವೈಜ್ಞಾನಿಕ ದೃಷ್ಟಿ ಮತ್ತು ಹಂರಿದುಂಬಿಸುವ ಮನೋ ವೈಶಾಲ್ಯ ನಮಗೆಲ್ಲ ಒಂದು ಅಪೂರ್ವ ಮಾದರಿ. ಅವರನ್ನೂ 'ಪುಸ್ತಕ ಪ್ರಪಂಚ'ದ ಸಂಪಾದಕ ಮಂಡಳಿ ಮತ್ತು ಆಡಳಿತ ವರ್ಗವನ್ನೂ ಹೃತ್ಪೂರ್ವಕ ಕೃತಜ್ಞತೆ ಗಳೊಂದಿಗೆ ಸ್ಮರಿಸುತ್ತೇನೆ.

ಮೂಲಲೇಖಕರಾದ ಶ್ರೀ ದಯಾನಂದ ವರ್ಮಾ ಅವರು ತಮ್ಮ ಈ ಸಂಕಲನವನ್ನು ಕನ್ನಡಿಸಿ ಪ್ರಕಟಪಡಿಸಲು ಅನುಮತಿ ನೀಡಿ ಉಪಕರಿಸಿದ್ದಾರೆ, ಅವರನ್ನು ನಮ್ಮ ಭಾಷಾಬಾಂಧವರಿಗೆ ಪರಿಚಯಿಸಲು ನನಗೆ ಹೆಮ್ಮೆಯೆನಿಸುತ್ತದೆ. ನನ್ನ ಬರವಣಿಗೆ ಹಾಗೂ ಭಾಷಾಂತರ ಕಾರ್ಯಗಳ ಬಗೆಗೆ ಕನ್ನಡ ಅಧ್ಯಯನ ಸಂಸ್ಥೆಯ ಮಾನ್ಯ ನಿರ್ದೇಶಕರಾದ ಡಾ. ಜೀ. ಶಂ. ಪರಮಶಿವಯ್ಯನವರು, ಹಿತೈಷಿಗಳಾದ ಡಾ. ಸಿ. ಪಿ. ಕೆ., ಡಾ. ವೆಂಕಟಾಚಲ ಶಾಸ್ತ್ರಿ, ಶ್ರೀ ಪ್ರಧಾನ ಗುರುದತ್, ಡಾ. ಡಿ. ಕೆ. ರಾಜೇಂದ್ರ, ಶ್ರೀ ಹರಿಶಂಕರ್, ಡಾ. ಕಾಳೇಗೌಡ ನಾಗ ವಾರ, ಶ್ರೀ ಶಂಸ ಐತಾಳ, ಡಾ. ಹಿರಿಯಣ್ಣ, ಡಾ. ರಾಮಕೃಷ್ಣ, ಶ್ರೀಮತಿ ಪುಷ್ಪಲತಾ ಮತ್ತು ಶ್ರೀ ಮಾಧವ ಹಾಗೂ ಇತರರು ವಿಶೇಷ ಆಸಕ್ತಿ ತೋರಿಸು ತ್ತಿದ್ದಾರೆ. ಉತ್ತೇಜನ ನೀಡುತ್ತಿದ್ದಾರೆ. ಮಾತೋಶ್ರೀಯವರಾದ ಶ್ರೀಮತಿ ತುಳಸಮ್ಮನವರು, ಮಡದಿ ಶ್ರೀಮತಿ ಉಮಾಸರಸ್ವತಿ, ಶ್ರೀಮತಿ ಸುಧಾ, ಡಾ. ದಿನೇಶ್ ಮತ್ತು ಶ್ರೀಮತಿ ಜಿ. ಟಿ. ನಾರಾಯಣರಾವ್ ಅವರು ಪ್ರಬಂಧ ಗಳನ್ನು ಮೊದಲಿಗೆ ಓದಿ ಇಷ್ಟಪಟ್ಟಿದ್ದಾರೆ. ಪುಸ್ತಕಕ್ಕೆ ಮುಖಪುಟ ಹಾಗೂ ಒಳಚಿತ್ರಗಳನ್ನು ಶ್ರೀ ಕೆ. ಮುರಳೀಧರರಾಯರು ಸೊಗಸಾಗಿ ತಯಾರಿಸಿಕೊಟ್ಟಿ ದ್ದಾರೆ. ಈ ಸಂಕಲನವನ್ನು ಅಚ್ಚುಕಟ್ಟಾಗಿ ಅಚ್ಚಿಗೆ ಅಳವಡಿಸುವ ಹೊಣೆಯನ್ನು ಶ್ರೀ ಶಕ್ತಿ ಮುದ್ರಣಾಲಯದ ಶ್ರೀ ರಾ. ಪಂ. ಶ್ರೀನಿವಾಸಮೂರ್ತಿಯವರು ಮತ್ತು ಶ್ರೀ ಮೋಹನ್‌ರವರು ವಿಶ್ವಾಸಪೂರ್ವಕವಾಗಿ ನಿರ್ವಹಿಸಿ ನೆರವಾಗಿ ದ್ದಾರೆ. ಈ ಎಲ್ಲ ಮಹನೀಯರಿಗೂ ನನ್ನ ಆದರಪೂರ್ವಕವಾದ ನಮನಗಳು.

ಡಿಸೆಂಬರ್ ೧೯೮೭

ಕುವೆಂಪುನಗರ, ಮೈಸೂರು

ಲಕ್ಷ್ಮೀನಾರಾಯಣ ಅರೋರ



## ಒಳಪುಟಗಳಲ್ಲಿ . . .

೧



# ನಮ್ಮ ಅಭಿರುಚಿ:
# ನಮ್ಮ ಉದ್ಯೋಗ

ಇವರನ್ನು ಭೇಟಿಮಾಡಿ !

ಇವರು ಬ್ಯಾಂಕಿನಲ್ಲಿ ಗುಮಾಸ್ತರು. ವಯಸ್ಸು ಇಪ್ಪತ್ತಾರು ವರ್ಷ. ಆದರೆ ಬ್ಯಾಂಕಿನಲ್ಲಿ ಕೆಲಸದ ಮೇಲಿದ್ದಾಗ ಅರುವತ್ತು ವರ್ಷದ ಮುದುಕರಂತೆ ಇವರ ನಡಗೆ. ಸಣ್ಣ ಫೈಲನ್ನು ಮೇಲೆತ್ತಲೂ ಕಷ್ಟಪಟ್ಟು ಬಗ್ಗುತ್ತಾರೆ. ಭಾರ ಎತ್ತುವು ದರಲ್ಲಿ ಪ್ರಪಂಚ ದಾಖಲೆಯನ್ನು ಮುರಿಯುವುದಕ್ಕೆ ಹೊರಟಿದ್ದಾರೇನೊ ಎನ್ನು ವಂತಿರುತ್ತದೆ ಇವರ ಭಂಗಿ. ಕೆಲಸ ಮಾಡಬೇಕಾದರೆ ಐವತ್ತು ಬಾರಿ ಗಡಿ ಯಾರದ ಮೇಲೆಯೆ ಇವರ ಕಣ್ಣು. ಸಂಜೆ ಕಚೇರಿಯ ವೇಳೆ ಮುಗಿಯುತ್ತಲೇ ಹೇಗೆ ಮನೆಯ ಕಡೆ ದೌಡಾಯಿಸುತ್ತಾರೆಂದರೆ ಇದುವರೆಗೆ ಜೈಲಿನಲ್ಲಿದ್ದರೇನೊ, ಈಗತಾನೆ ಬಿಡುಗಡೆಯಾಗಿದೆಯೇನೊ ಎನಿಸುತ್ತದೆ,

ಚಟುವಟಿಕೆ ಅಂದರೆ ಏನೆಂದು ಇವರಿಗೆ ಗೊತ್ತಿಲ್ಲವೆ ?

ಅದು ಹೇಗೆ ಸಾಧ್ಯ ? ಪರ್ವತಗಳನ್ನೂ ಬೆಟ್ಟಗುಡ್ಡಗಳನ್ನೂ ಹತ್ತ

ಬೇಕಾದರೆ ನೀವು ಇವರನ್ನು ನೋಡಬೇಕು. ಎತ್ತರದ ಬಂಡೆಗಳನ್ನು ಸಲೀಸಾಗಿ ಏರುವ ಇಳಿಯುವ ಇವರು ಬೇರೆ ವ್ಯಕ್ತಿಯೇನೊ ಎನಿಸುತ್ತದೆ. ಬ್ಯಾಂಕಿನಲ್ಲಿ ಫೈಲು ಎತ್ತಲೂ ತಿಣುಕಾಡುವ ಕೈ ಈಗ ಇಪ್ಪತ್ತು–ಇಪ್ಪತ್ತೈದು ಕಿಲೋಗ್ರಾಂಗಳಷ್ಟು ತೂಕವನ್ನು ಅನಾಯಾಸವಾಗಿ ಎತ್ತಿಕೊಂಡು ಹೋಗಬಲ್ಲದು.

ಇವರನ್ನೂ ಭೇಟಿಮಾಡಿ !

ಇವರು ಬಟ್ಟೆ ವ್ಯಾಪಾರಿಗಳು. ಬೆಳಗ್ಗೆ ಅಂಗಡಿಗೆ ಹೋಗಬೇಕಾದರೆ ಬಸ್ಸಿಗಾಗಿ ಸಾಲಿನಲ್ಲಿ ಕಾಯುವುದು ಇವರಿಗೆ ಸಾಧ್ಯವಿಲ್ಲ. ಹಾಗಾಗಿ ತಕ್ಷಣ ಬಸ್ಸು ಸಿಗದಿದ್ದರೆ ಆಟೊ ಇಲ್ಲವೆ ಟ್ಯಾಕ್ಸಿ ಹತ್ತಿ ಹೊರಟುಬಿಡುತ್ತಾರೆ. ಕಾಯುವುದು ಇವರ ಪಾಲಿಗೆ 'ಬೋರ್' ಹೊಡೆಯುವ ಕೆಲಸ. ಆದರೆ ಮೀನು ಹಿಡಿಯುವುದು ಇವರ ಹವ್ಯಾಸ. ರಜೆ ದಿನ ಬಲೆ-ಗಾಳ ಹಿಡಿದು ಬೆಳಗ್ಗೆ ನದಿಯ ದಡದಲ್ಲಿ ಕುಳಿತರೆಂದರೆ ಹೊತ್ತು ಹೋಗುವುದೇ ತಿಳಿಯುವುದಿಲ್ಲ. ನೀರಲ್ಲಿ ಗಾಳ ಬಿಟ್ಟು ಗಂಟೆಗಟ್ಟಲೆ ಮೀನಿಗಾಗಿ ಕಾಯುತ್ತಾ ಕುಳಿತಿರುತ್ತಾರೆ. ಆಗ ಇವರಿಗೆ ಸ್ವಲ್ಪವೂ 'ಬೋರ್' ಆಗುವುದಿಲ್ಲ.

ಅಂದಹಾಗೆ ಇವರನ್ನು ಸಹ ಭೇಟಿಯಾಗಿಬಿಡಿ !

ಇವರು ದೊಡ್ಡ ಸರ್ಕಾರಿ ಕಚೇರಿಯೊಂದರ ಸೂಪರಿಂಟೆಂಡೆಂಟರು. ಮೇಜಿನ ಮೇಲೆ ಇವರ ಮುಂದೆ ಕೇವಲ ಸಹಿಗಾಗಿ ಫೈಲುಗಳು ಕಾದು ಕುಳಿತಿರುತ್ತವೆ. ಆದರೆ ಇವರಿಗೆ ಅವುಗಳ ಬಗೆಗೆ ಎಳ್ಳಷ್ಟೂ ಚಿಂತೆಯಿಲ್ಲ. ಫೈಲುಗಳು ಅಂಬಾರಿಯೆತ್ತರ ಏರಿದಾಗ, ಇನ್ನೂ ಪೇರಿಸುವುದು ಸಾಧ್ಯವಾಗುವುದಿಲ್ಲ ಎಂದು ಅನಿಸಿದಾಗ ಇವರು ಒಂದೊಂದೇ ಫೈಲನ್ನು ಕೈಗೆತ್ತಿಕೊಳ್ಳುತ್ತಾರೆ, ಒಲ್ಲದ ಮನಸ್ಸಿನಿಂದ ಅದರ ಮೇಲೆ ಕಣ್ಣು ಹಾಯಿಸಿ ರುಜುಮಾಡುತ್ತಾರೆ. ಫೈಲುಗಳನ್ನು ನೋಡಿ ಮುಗಿಸುವಷ್ಟರಲ್ಲಿ ಸೋತು ಹಣ್ಣಾಗುತ್ತಾರೆ. ಇವರ ಮೂಡ್ ಯಾವಾಗಲೂ ಚೆನ್ನಾಗಿರುವುದಿಲ್ಲ ಅಂತ ಕೈಕೆಳಗಿನವರು ಹೇಳುತ್ತಿರುತ್ತಾರೆ.

ಕಚೇರಿ ಮುಗಿಯುತ್ತಲೇ ಮನೆಯ ಕಡೆ ಓಡುತ್ತಾರೆ. ಆಗ ಇವರ ಮನಸ್ಸಿನಲ್ಲಿ ಒಂದೇ ವಿಚಾರ ತುಡಿಯುತ್ತಿರುತ್ತದೆ—ಮನೆಯಲ್ಲಿ ಯಾರಾದರೂ ರೋಗಿಗಳು ಕಾಯುತ್ತಿರಬಹುದು.

ರೋಗಿಗಳು ?

ಹೌದು, ಖಂಡಿತ ರೋಗಿಗಳೇ. ಇವರು ಹವ್ಯಾಸಿ ಹೋಮಿಯೋಪಥಿ ಡಾಕ್ಟರರು. ತಮ್ಮ ಅಧಿಕಾರಿಗಳ ಬಗೆಗಿನ ಕಾಳಜಿಗಿಂತ ಮಿಗಿಲಾಗಿ ಇವರಿಗೆ ತಮ್ಮ ರೋಗಿಗಳ ಬಗ್ಗೆಯೇ ಚಿಂತೆ ಜಾಸ್ತಿ. ರೋಗಿಗಳಿಗೆ ಪುಕ್ಕಟೆ ಔಷಧ

ಸಲಹೆ ನೀಡುತ್ತಾರೆ. ತುಂಬಾ ಎಚ್ಚರಿಕೆಯಿಂದ ರೋಗದ ತಪಾಸಣೆ ನಡೆಸುತ್ತಾರೆ. ರಾತ್ರಿ ತುಂಬಾ ಹೊತ್ತಾಗುವವರೆಗೂ ವೈದ್ಯಕೀಯ ವಿಚಾರಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಓದುತ್ತಿರುತ್ತಾರೆ. ಇವರನ್ನು ನಗುಮುಖದಿಂದ ಇಡಬೇಕಾದರೆ ಏನೂ ಮಾಡುವುದು ಬೇಡ, ಇವರ ರೋಗಿಯಾಗಿಬಿಟ್ಟರೆ ಸಾಕು ಎನ್ನುತ್ತಾರೆ ಇವರ ಸಮೀಪವರ್ತಿಗಳು. ಇವರ ಹತ್ತಿರ ಪುಕ್ಕಟೆ ಔಷಧ ತೆಗೆದುಕೊಂಡು ಕೃತಕೃತ್ಯರನ್ನಾಗಿ ಮಾಡಿಬಿಟ್ಟರೆ ಸಾಕು, ಬೇರೆಯವರೊಡನೆ ಇವರ ಮೂಡ್ ಹೇಗೇ ಇರಲಿ, ನಿಮ್ಮೊಡನಂತೂ ಚೆನ್ನಾಗಿರುತ್ತಾರೆ.

ಮೂಡ್ ! ಅಂದಹಾಗೆ ಇವತ್ತು ಪ್ರತಿಯೊಬ್ಬ ವ್ಯಕ್ತಿಯ ತಲೆಯ ಮೇಲೂ ಈ ಮೂಡ್ ಅನ್ನುವ ಭೂತ ಸವಾರಿ ಮಾಡುತ್ತಿರುತ್ತದೆ.

ಇನ್ನೊಂದು ಪದ ಸಹ ಬಹಳವಾಗಿ ಕೇಳಿಬರುತ್ತಿರುತ್ತದೆ—ಬೋರ್ !

ಯಾರನ್ನು ಬೇಕಾದರೂ ನೋಡಿ, ಅವರ 'ಮೂಡ್' ಕೆಟ್ಟಿರುತ್ತದೆ, ಇಲ್ಲವೆಂದರೆ ಅವರಿಗೆ 'ಬೋರ್' ಹೊಡೆಯುತ್ತಿರುತ್ತದೆ. ಓದುಬರಹ ಬಾರದವರು ಸಹ ಅರ್ಥ ಗೊತ್ತಿಲ್ಲದಿದ್ದರೂ ಈ ಪದಗಳ ಪ್ರಯೋಗವನ್ನು ಸರಿಯಾಗಿ ಮಾಡಬಲ್ಲರು.

ಈ ಪದಗಳು ಇಷ್ಟು ಚಾಲ್ತಿಯಲ್ಲಿರುವ ಕಾರಣ ಏನೆಂದರೆ ನಮ್ಮ ಸಮಾಜದಲ್ಲಿ ಉದ್ಯೋಗವನ್ನು ಆರಿಸಿಕೊಳ್ಳಬೇಕಾದರೆ 'ಅಭಿರುಚಿ'ಯ ಕಡೆಗೆ ಅಷ್ಟಾಗಿ ಗಮನ ಕೊಡುವುದಿಲ್ಲ.

ಮಕ್ಕಳಿಗೆ ಯಾವ ವಿಷಯವಾಗಿ ಅಥವಾ ಯಾವ ಕೆಲಸದಲ್ಲಿ ಆಸಕ್ತಿ ಇದೆ ಎಂದು ತಿಳಿಯುವ ಪ್ರಯತ್ನವನ್ನು ತಂದೆತಾಯಿಗಳು ಮಾಡುವುದಿಲ್ಲ. ತಮ್ಮ ಅಥವಾ ತಮಗೆ ತೋಚಿದ ಅಚ್ಚಿನಲ್ಲೇ ಅವರನ್ನು ಎರಕ ಹೊಯ್ಯುವ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ಉದ್ಯೋಗವನ್ನು ಹುಡುಕಿಕೊಂಡು ಹೊರಡುವ ಯುವಕರು ತಮ್ಮ ಆಸಕ್ತಿ ಯಾವ ದಿಕ್ಕಿನಲ್ಲಿದೆ ಎಂದು ಯೋಚನೆ ಮಾಡುವುದಿಲ್ಲ. ಅದಕ್ಕೆ ಬದಲಾಗಿ ಮಾರುಕಟ್ಟೆಯಲ್ಲಿ ಯಾವ ವಿಷಯಕ್ಕೆ 'ಸ್ಕೋಪ್' ಇದೆ ಎಂಬುದರ ಮೇಲೆ ಕಣ್ಣಿಡುತ್ತಾರೆ.

ಕೆಲಸದ ಬೇಟೆಗೆ ಹೊರಡುವ ಯುವಕ ತನ್ನ ಒಲವು ಯಾವ ಉದ್ಯೋಗವನ್ನು ಮಾಡಬೇಕು ಎಂಬುದರ ಕಡೆ ಇದೆ ಎನ್ನುವುದನ್ನು ಮರೆತು ಯಾವ ಕೆಲಸದಲ್ಲಿ ಸಂಬಳದ ಗ್ರೇಡು ಹೆಚ್ಚಾಗಿದೆ ಎಂಬುದಾಗಿ ಯೋಚಿಸುತ್ತಾನೆ. ಅವನು ಯಾವುದೇ ಕೆಲಸದಲ್ಲಿರಲಿ ಅದಕ್ಕಿಂತ ಹೆಚ್ಚಿನ ವೇತನ ಶ್ರೇಣಿಯ ಇನ್ನೊಂದು ಕೆಲಸ ದೊರೆತ ಒಡನೆಯೆ ಮೊದಲಿನ ಕೆಲಸಕ್ಕೆ ನಮಸ್ಕಾರ ಹೊಡೆಯಲು ತುದಿ

ಗಾಲಲ್ಲಿ ನಿಂತಿರುತ್ತಾನೆ. ಪ್ರಪಂಚದಲ್ಲಿ ಸಂಬಳವೇ ಸರ್ವಸ್ವ, ಅಭಿರುಚಿಗೆ ಯಾವುದೇ ಮಹತ್ವ ಇಲ್ಲ ಎಂಬಂತಾಗಿಬಿಟ್ಟಿದೆ.

ಇಂಥ ವ್ಯಕ್ತಿಗೆ ತನ್ನ ಕೆಲಸದಿಂದ ಸಂಬಳ ಖಂಡಿತವಾಗಿ ಸಿಗುತ್ತದೆ, ಮನಸ್ಸಿನ ಸಂತೋಷವಲ್ಲ. ಮೊದಲಿಗೆ ಇಲ್ಲಿ ನೀಡಲಾಗಿರುವ ಉದಾಹರಣೆಗಳೆಲ್ಲವೂ ಇಂಥ ವ್ಯಕ್ತಿಗಳದೇ. ಈ ಸ್ವಭಾವದ ಜನ ತಮ್ಮ ಉದ್ಯೋಗದಿಂದ ಜೀವನೋಪಾಯವನ್ನು ಪಡೆದುಕೊಂಡರೂ ಮನಸ್ಸಿನ ತೃಪ್ತಿಯನ್ನು ಬೇರೆ ಮಾರ್ಗಗಳಿಂದ ಅರಸಲು ಹೊರಡುತ್ತಾರೆ. ಇಡೀ ದಿನ ಅವರು ತಮ್ಮ ಉದ್ಯೋಗದಲ್ಲಿ ಕಳೆಯುವಷ್ಟು ಕಾಲ ನಿರುತ್ಸಾಹದಿಂದ ಕೂಡಿರುತ್ತಾರೆ. ಅವರ ಶಕ್ತಿಯೆಲ್ಲ ಆ ವೇಳೆಯಲ್ಲಿ ಪೂರ್ತಿಯಾಗಿ ಕೆಲಸದಲ್ಲಿ ತೊಡಗಿರುವುದಿಲ್ಲ. ಅವರು ಅಂಗಡಿ ಮಾಲೀಕರಾದರೆ ತಡವಾಗಿ ಬಾಗಿಲು ತೆರೆಯುತ್ತಾರೆ. ಅಂಗಡಿಯನ್ನು ಶುಚಿಯಾಗಿ ಇಡುವ ಕಡೆ ಗಮನ ಕೊಡುವುದಿಲ್ಲ, ಗಿರಾಕಿಗಳು ತೃಪ್ತಿಯಿಂದ ಹೋದರೂ ಸರಿ ಬಿಟ್ಟರೂ ಸರಿ ಅವರಿಗೆ ಅದರ ಪರಿವೆ ಇರುವುದಿಲ್ಲ. ವ್ಯಾಪಾರದ ಆಳಕ್ಕೆ ಅವರು ಇಳಿಯಬಯಸುವುದಿಲ್ಲ. ಇದರ ಪರಿಣಾಮವಾಗಿ ಇತರ ವ್ಯಾಪಾರಿಗಳೊಡನೆ ಪೈಪೋಟಿಯಲ್ಲಿ ಹಿಂದೆ ಬೀಳುತ್ತಾರೆ. ಈ ರೀತಿಯ ಅನ್ಯಮನಸ್ಕರು ಕಚೇರಿ ಕೆಲಸಗಾರರಾದರೆ ತಡವಾಗಿ ಕಚೇರಿಗೆ ಹಾಜರಾಗುತ್ತಾರೆ. ವೇಳೆ ಮುಗಿಯುತ್ತಿರುವಾಗಲೇ ಕುರ್ಚಿ ಖಾಲಿ ಮಾಡುವುದನ್ನು ಬಿಟ್ಟರೆ ಅವರಿಂದ ಇನ್ನಾವ ಕೆಲಸವೂ ಆಗುವುದಿಲ್ಲ.

ನಮ್ಮ ದೇಶದಲ್ಲಿ ತಜ್ಞರ ಕೊರತೆ ಇದೆಯೆಂದು ಹೇಳುತ್ತಾರೆ. ಇದಕ್ಕೆ ಕಾರಣವೇನೆಂದರೆ ನಮ್ಮಲ್ಲಿ ಅಭಿರುಚಿಯ ಕಡೆಗೆ ಜನ ಗಮನ ಕೊಡುವುದಿಲ್ಲ. ಅಂದಮೇಲೆ ತಜ್ಞರಾಗುವುದಾದರೂ ಹೇಗೆ ? ವಿದ್ಯಾರ್ಥಿ ದೆಸೆಯಲ್ಲಿ ಅಭಿರುಚಿ ಯಾವ ವಿಷಯದಲ್ಲಿ ಇರುತ್ತದೊ ಅದನ್ನು ಗಮನಿಸದೆ ಬೇರಾವುದೋ ವಿಷಯವನ್ನು ಓದಲು ಒತ್ತಾಯ ಮಾಡಲಾಗುತ್ತದೆ, ಆ ವಿಷಯ ನಮಗೆ ಪೂರ್ತಿಯಾಗಿ ಅರ್ಥವಾಗದಿದ್ದರೂ ಸರಿ ! ಮನಸ್ಸಿಲ್ಲದ ಮನಸ್ಸಿನಿಂದ ನಾವು ಓದುತ್ತಾ ಹೋಗುತ್ತೇವೆ, ಫೇಲಾಗುತ್ತಿರುತ್ತೇವೆ. ಇಲ್ಲವೆ ಕಡಮೆ ಅಂಕಗಳನ್ನು ಪಡೆದು ಮುಂದೆ ಹೋಗುತ್ತಿರುತ್ತೇವೆ. ಶಾಲೆಯೆಂದರೆ ಭಯಂಕರ ಎನ್ನುವ ಮನೋಭಾವನೆ ಹುಟ್ಟಿಬಿಟ್ಟಿರುತ್ತದೆ. ಒಂದೆಡೆ ಅಧ್ಯಾಪಕರು ನಮ್ಮನ್ನು ದಡ್ಡರೆಂದು ತಿಳಿದುಕೊಂಡರೆ ಇನ್ನೊಂದೆಡೆ ತಂದೆ ತಾಯಿಗಳ ಅವಹೇಳನೆಯನ್ನೂ ಸಹಿಸುತ್ತಿರಬೇಕಾಗುತ್ತದೆ. ನಮ್ಮಲ್ಲಿ ಕೀಳರಿಮೆ ಮನೆ ಮಾಡುತ್ತದೆ. ಯಾವ ವಿಷಯದಲ್ಲೂ ನಾವು ಸೈ ಎನಿಸಿಕೊಳ್ಳಲಾರೆವು. ಹೇಗೋ ಕೆಲಸ ಮಾಡಿಕೊಂಡು ಹೋಗಲು

ಗೊತ್ತಿರುವುದರಿಂದ ಸಿಕ್ಕಿದ ಕೆಲಸಕ್ಕೆ ಸೇರಿ ಅದರಲ್ಲೇ ಖುಷಿ ಪಡುತ್ತೇವೆ. ಅಭಿರುಚಿಗೆ ಅನುಗುಣವಾಗಿ ಕೆಲಸ ಹುಡುಕುವ ಪ್ರಯತ್ನ ಮಾಡುವುದಿಲ್ಲ. ಪ್ರಯತ್ನ ಮಾಡುವುದಾದರೂ ಹೇಗೆ? ನಮ್ಮ ಅಭಿರುಚಿ ವಾಸ್ತವವಾಗಿ ಯಾವ ಕಡೆ ಇದೆಯೆಂದು ಗೊತ್ತಿದ್ದರೆ ತಾನೆ!

ಯಾವ ಕೆಲಸದಲ್ಲಿ ನಮಗೆ ಮನಸ್ಸಿರುವುದಿಲ್ಲವೊ ಅದನ್ನು ಮಾಡಲು ಬುದ್ಧಿ ಸಹ ಓಡುವುದಿಲ್ಲ ಎನ್ನುತ್ತದೆ ಮನೋವಿಜ್ಞಾನ. ಬುದ್ಧಿ ಯಾವಾಗ ಓಡುವುದಿಲ್ಲವೊ ಆಗ ಆ ವಿಷಯದಲ್ಲಿ ಪ್ರವೀಣರಾಗುವ ಪ್ರಶ್ನೆಯೆ ಏಳುವಂತಿಲ್ಲ. ಹಾಗಾಗಿ ನಮ್ಮ ಮನಸ್ಸು ಯಾವ ಕಡೆಗಿದೆ, ಅಂದರೆ ನಮ್ಮ ಅಭಿರುಚಿ ಯಾವ ವಿಷಯದ ಬಗೆಗೆ ಇದೆ ಎಂಬುದನ್ನೂ ಸಹ ನಾವು ಕಂಡುಕೊಳ್ಳುವ ಸ್ಥಿತಿಯಲ್ಲಿರುವುದಿಲ್ಲ.

ಈಗ ನೋಡೋಣ. ಮೊದಲು ನಮ್ಮ ಆತ್ಮಪರೀಕ್ಷೆ ಮಾಡಿಕೊಂಡು ವಾಸ್ತವವಾಗಿ ನಮ್ಮ ಅಭಿರುಚಿ ಯಾವ ಕಡೆಗೆ ಇದೆಯೆಂದು ಕಂಡುಕೊಳ್ಳೋಣ. ನಮ್ಮ ಎಲ್ಲ ಇಂದ್ರಿಯಗಳೂ ಒಂದುಗೂಡಿ ಏಕಾಗ್ರಚಿತ್ತದಿಂದ ನೋಡಬಹುದಾದಂಥ ಕೆಲಸ ಯಾವುದು? ಯಾವ ಕೆಲಸ ಮಾಡುವಾಗ ನಮಗೆ ಸಮಯ ಕಳೆಯುವ ಪರಿವೆಯೆ ಇರುವುದಿಲ್ಲ, ಯಾವ ಕೆಲಸದಲ್ಲಿ ತೊಡಗಿದಾಗ ಆಯಾಸವೆಂಬುದೇ ನಮ್ಮ ಹತ್ತಿರ ಸುಳಿಯುವುದಿಲ್ಲ ಇಂಥ ಕೆಲಸವೇ ನಮ್ಮ ಅಭಿರುಚಿಗೆ ಒಗ್ಗುವ ಕೆಲಸ. ಒಂದುವೇಳೆ ಮೇಲೆ ಹೇಳಿರುವ ವಿವರಣೆಗೆ ಅನುಗುಣವಾಗಿ ನಮ್ಮ ಅಭಿರುಚಿ ಸಿನಿಮಾ ನೋಡುವುದು, ಇಸ್ಪೀಟು ಆಡುವುದು, ಚದುರಂಗ ಆಡುವುದು ಇವುಗಳ ಕಡೆಗಿದ್ದರೆ ಇಂಥ ಆಸಕ್ತಿಗಳನ್ನೇ ಬೆಳೆಸಿಕೊಳ್ಳುವುದು ಉಚಿತವೆ?

ನಾನು ಎತ್ತಿರುವ ಅನುಮಾನಕ್ಕೆ ನಾನೇ ಉತ್ತರವನ್ನು ಕೊಡ ಕೊಡುತ್ತಿದ್ದೇನೆ. ಚಲನಚಿತ್ರ ಮುಂತಾದ ಹೊತ್ತು ಕಳೆಯುವ ವಿಷಯಗಳ ಬಗ್ಗೆ ಒಬ್ಬ ಮನುಷ್ಯನಿಗೆ ಒಲವು ಹೆಚ್ಚಾಗಿದೆ ಎನ್ನುವುದರ ಅರ್ಥ ಆ ಮನುಷ್ಯನಿಗೆ ಆಸಕ್ತಿ ಹುಟ್ಟಿಸುವ ಯಾವ ಕಾರ್ಯಕ್ಷೇತ್ರವೂ ಸಿಕ್ಕಿಲ್ಲ, ಆದರಿಂದ ಅವನು ನಿರಾಸಕ್ತಿಯ ಕೆಲಸದಿಂದ ಪಲಾಯನ ಮಾಡುವ ಸಲುವಾಗಿ ಮನೋರಂಜನೆಯ ಬೇರೆ ಬೇರೆ ಮಾರ್ಗಗಳನ್ನು ಕಂಡುಕೊಳ್ಳುತ್ತಿದ್ದಾನೆ ಎಂದಾಗುತ್ತದೆ. ಒಂದುವೇಳೆ ಅವನ ಕಾರ್ಯಕ್ಷೇತ್ರ ಅವನ ಅಭಿರುಚಿಗೆ ತಕ್ಕಂತಿದ್ದರೆ ಸಿನೆಮಾ ಮುಂತಾದ ಮನೋರಂಜನೆಗಳಿಗಿಂತ ಅದರಲ್ಲೇ ಅವನು ಹೆಚ್ಚು ಆನಂದವನ್ನು ಪಡೆಯುತ್ತಿದ್ದ. ಅವನು ತನ್ನ ಕೆಲಸದಿಂದ ದೂರ ಸರಿಯಲು ಇಷ್ಟಪಡುತ್ತಲೇ ಇರಲಿಲ್ಲ.

ಪ್ರಪಂಚದ ಯಶಸ್ವಿ ವ್ಯಕ್ತಿಗಳ ಜೀವನ ಚರಿತ್ರೆಯನ್ನು ನೋಡಿದರೆ ಅವರೆಲ್ಲ ಬಹುಮಟ್ಟಿಗೆ ತಮ್ಮ ಅಭಿರುಚಿಗೆ ಹೊಂದುವಂತಹ ಕಾರ್ಯಕ್ಷೇತ್ರಗಳನ್ನು ಕಂಡುಕೊಂಡು ಕೆಲಸಮಾಡಿರುವ ಅಂಶ ಹೊರಬೀಳುತ್ತದೆ. ಒಂದುವೇಳೆ ಅವರನ್ನು ಬೇರೆ ಬೇರೆ ಕ್ಷೇತ್ರಗಳಲ್ಲಿ ತೊಡಗಿಸಿದ್ದರೆ ಅವರು ಬಹುಶಃ ಗುರಿಯನ್ನು ಮುಟ್ಟುತ್ತಿರಲಿಲ್ಲವೇನೋ.

ಒಂದು ಕ್ಷಣ ತೇನ್‌ಸಿಂಗನನ್ನು ನೆನಪಿಸಿಕೊಳ್ಳಿ. ಎವರೆಸ್ಟ್ ವಿಜಯವನ್ನು ಸಾಧಿಸಿದ ಮೇಲೆ ಕೆಲವು ಕಾಲ ಆತ ಪ್ರಪಂಚದ ಪ್ರಸಿದ್ಧ ವ್ಯಕ್ತಿಗಳಲ್ಲಿ ಒಬ್ಬನೆಂದೆನಿಸಿಕೊಂಡಿದ್ದ. ಅವನನ್ನು ಬಲವಂತವಾಗಿ ಎಲ್ಲಾದರೂ ಗುಮಾಸ್ತೆಯ ಕೆಲಸಕ್ಕೆ ಹಾಕಿದ್ದಿದ್ದರೆ ಅವನು ತನ್ನ ಕಾರ್ಯದಕ್ಷತೆಯ ದೆಸೆಯಿಂದಾಗಿ ತುಂಬ ಮೇಲ್ಮಟ್ಟದ ಹುದ್ದೆಗೇರಲು ಸಾಧ್ಯವಾಗುತ್ತಿತ್ತೆ ?

ಬಹುಶಃ ಸಾಧ್ಯವಾಗುತ್ತಿರಲಿಲ್ಲವೇನೊ. ಅವನು ತಾನೇ ಕೆಲಸಬಿಟ್ಟು ಹೊರಟುಬಿಡುತ್ತಿದ್ದ. ಇಲ್ಲವೆ ಒಂದುವೇಳೆ ಅವನು ಕೆಲಸಕ್ಕೆ ಅಂಟಿಕೊಂಡೇ ಇದ್ದರೆ ಅವನ ತಪ್ಪು ತಪ್ಪು ಕೆಲಸಗಳನ್ನು ಸಹಿಸಲಾರದೆ ಮೇಲಧಿಕಾರಿ ಬೇರೆ ಕಡೆಗೆ ಅವನು ವರ್ಗವಾಗುವಂತೆ ಮಾಡಲು ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿದ್ದ. ಗುಮಾಸ್ತೆ ಕೆಲಸದಲ್ಲಿ ಅವನು ತನ್ನ ಸಹೋದ್ಯೋಗಿಗಳೊಡನೆ ಸಿಟ್ಟಿನಿಂದ ಮಾತನಾಡುತ್ತಿದ್ದ ಹಾಗೂ ಸಂಜೆ ಮನೆ ತಲುಪಿದ ಮೇಲೆ ತಲೆ ನೋವಿನಿಂದ ನರಳುತ್ತಿದ್ದ. ಕೆಲಸಕ್ಕೆ ಬಾರದ ವಿಚಾರಗಳಿಗಾಗಿ ಹೆಂಡತಿ ಮಕ್ಕಳೊಡನೆ ಜಗಳವಾಡುತ್ತಿದ್ದ. ನರದೌರ್ಬಲ್ಯದ ರೋಗಿಯಾಗುತ್ತಿದ್ದ ಇಲ್ಲವೆ ಹುಚ್ಚಾಸ್ಪತ್ರೆ ಸೇರುತ್ತಿದ್ದ. ಪರ್ವತಾರೋಹಣ ಸಮಯದಲ್ಲಿ ಸಂತೃಪ್ತಿಯಿಂದ ಜಾಗ್ರತವಾಗುತ್ತಿದ್ದ ಅವನ ಶಕ್ತಿಯೆಲ್ಲ ಕಚೇರಿ ಕೆಲಸದ ವೇಳೆಯಲ್ಲಿ ಸುಪ್ತಾವಸ್ಥೆಯಲ್ಲಿರುತ್ತಿತ್ತು.

ನಾನು ಈವರೆಗೆ ಹೇಳಿದಂಥ ವಿಚಾರಕ್ಕೆ ಕೊಟ್ಟ ಉದಾಹರಣೆ ಪ್ರಾಯಃ ಕಾಲ್ಪನಿಕವೆನಿಸಬಹುದೇನೊ. ಆದರೆ ಈ ಮುಂದೆ ಹೇಳಲಿರುವ ಘಟನೆ ನನ್ನ ಕಣ್ಣೆದುರಿಗೇ ನಡೆದುದು—

ನನ್ನ ನೆರೆಮನೆಯ ಒಬ್ಬ ಹುಡುಗ ಪ್ರತಿನಿತ್ಯ ಸ್ಕೂಲಿನಿಂದ ಓಡಿಬಂದು ಬಿಡುತ್ತಿದ್ದ. ಓದುವುದು ಬರೆಯುವುದರಲ್ಲಿ ಅವನಿಗೆ ಆಸಕ್ತಿ ಇರುತ್ತಿರಲಿಲ್ಲ. ಅಧ್ಯಾಪಕರು ಅವನನ್ನು ದಡ್ಡನೆಂದೇ ತಿಳಿದಿದ್ದರು. ಅವನು ಹೇಗಾದರೂ ಮಾಡಿ ಮೆಟ್ರಿಕ್ ಪಾಸುಮಾಡಲಿ ಎಂಬುದು ತಂದೆತಾಯಿಗಳ ಬಯಕೆಯಾಗಿತ್ತು. ಆ ಮೇಲೆ ಎಲ್ಲಾದರೂ ನೂರೋ ನೂರೈವತ್ತೊ ಸಂಬಳ ಸಿಕ್ಕರೆ ಸಾಕು ಎಂದು

ಅವರು ಅಂದುಕೊಂಡಿದ್ದರು. ಆದರೆ ಯಂತ್ರಗಳೊಡನೆ ಕೆಲಸ ಮಾಡುವುದು ಹುಡುಗನಿಗೆ ತುಂಬ ಇಷ್ಟವಾಗುತ್ತಿತ್ತು. ಅವನ ನಾಲ್ಕು ಮಂದಿ ಅಣ್ಣಂದಿರು ಸರ್ಕಾರಿ ಹಾಗೂ ಖಾಸಗಿ ಕೆಲಸಗಳಿಗೆ ಸೇರಿ ಗುಮಾಸ್ತಗಿರಿ ಮಾಡುತ್ತಿದ್ದರು. ಎಲ್ಲರಿಗಿಂತ ಚಿಕ್ಕವುಗ ಜಿಡ್ಡುಗಟ್ಟಿದ ಕೊಳಕುಬಟ್ಟೆಯೊಡನೆ ಮನೆಗೆ ಹಿಂದಿರುಗುವುದು ಅಪ್ಪ ಅಮ್ಮನಿಗೆ ಬೇಡವಾಗಿತ್ತು.

ದೊಡ್ಡವರ ಇಷ್ಟಕ್ಕೆ ವಿರುದ್ಧವಾಗಿ ಆ ಹುಡುಗ ಶಾಲೆಗೆ ನಮಸ್ಕಾರ ಹೊಡೆದು ತುಂಬ ಕಡಮೆ ಸಂಬಳದ ಮೇಲೆ ಒಂದು ವರ್ಕ್‌ಷಾಪಿನಲ್ಲಿ ಕೆಲಸಕ್ಕೆ ಸೇರಿಕೊಂಡ. ಕಾರ್ಖಾನೆ ಕೆಲಸಗಾರರು ಹಾಕಿಕೊಳ್ಳುವ ಜಿಡ್ಡು ಕೊಳೆ ಬಟ್ಟೆಯಲ್ಲಿ ಅವನು ಕೆಲಸ ಮುಗಿಸಿ ಮನೆಗೆ ಬಂದಾಗಲೂ ತುಟಿಯಂಚಿನಲ್ಲಿ ಮುಗುಳುನಗೆ ಇರುತ್ತಿತ್ತು. ಕುರ್ಚಿಯಲ್ಲಿ ಕುಳಿತು ಕೆಲಸ ಮಾಡಿದರೂ ಸಂಜೆಯವೇಳೆಗೆ ದಣಿದ ಮುಖದೊಡನೆ ಮನೆಯೊಳಗೆ ಕಾಲಿಡುತ್ತಿದ್ದ ಅಣ್ಣಂದಿರಿಗಿಂತಲೂ ಅವನು ಖುಷಿಯಾಗಿರುತ್ತಿದ್ದ. ಆದರೆ ಇವತ್ತು ! ಕೊಳೆ ಬಟ್ಟೆ ತೊಟ್ಟು ಮನೆಗೆ ಹಿಂದಿರುಗುವ ತಮ್ಮನ ಆದಾಯ ಉಳಿದ ಅಣ್ಣಂದಿರಿಗಿಂತಲೂ ಜಾಸ್ತಿ. ಸ್ಕೂಲಿನಿಂದ ಓಡಿಬರುತ್ತಿದ್ದ 'ದಡ್ಡ' ಹುಡುಗ ರಾತ್ರಿ ವೇಳೆ ದೀಪ ಹಚ್ಚಿಕೊಂಡು ಓದಿ ತನ್ನ ಕೆಲಸಕ್ಕೆ ಸಂಬಂಧಪಟ್ಟ ಓದಿನಲ್ಲಿ ಅನೇಕ ಪರೀಕ್ಷೆಗಳನ್ನು ಒಳ್ಳೆಯ ಅಂಕಗಳೊಡನೆ ಪಾಸುಮಾಡಿದ್ದಾನೆ. ಇನ್ನೂ ಉತ್ತಮವಾದ ಪದವಿಗೆ ಅವನು ಏರುವ ಎಲ್ಲ ಲಕ್ಷಣಗಳೂ ಇವೆ. ಏಕೆಂದರೆ ಅವನ ಉದ್ಯೋಗ ಅವನಿಗೆ ಖುಷಿ ತರುತ್ತಿದೆ.

ಅಭಿರುಚಿಯಿಲ್ಲದೆ ನಾವು ಏನನ್ನೂ ಕಲಿಯಲು ಸಾಧ್ಯವಾಗುವುದಿಲ್ಲ. ಎರಡು ವರ್ಷಗಳ ಕಾಲ ಪ್ರಯತ್ನ ಪಟ್ಟರೂ ನನಗೆ ಮೋಟಾರ್ ಸೈಕಲ್ ಓಡಿಸಲು ಸರಿಯಾಗಿ ಕಲಿಯಲಾಗಲಿಲ್ಲ. ಅದೇ ನನ್ನ ತಮ್ಮ ಎರಡೇ ಗಂಟೆಯಲ್ಲಿ ಕಲಿತು ಸೊಗಸಾಗಿ ಓಡಿಸುತ್ತಾನೆ. ನಾನು ಕಾಟಾಚಾರಕ್ಕೆ ಕಲಿಯಲು ಪ್ರಯತ್ನ ಪಟ್ಟಿದ್ದೆ, ಆದರೆ ಕಲಿಯುವ ಬಗೆಗೆ ನನ್ನ ತಮ್ಮನಲ್ಲಿ ಒಳಆಕಾಂಕ್ಷೆ ತೀವ್ರವಾಗಿತ್ತು.

ಅಭಿರುಚಿಗೆ ಅನುಗುಣವಾಗಿ ದೊರೆಯುವ ಕೆಲಸದಿಂದ ಉಂಟಾಗುವ ಕಷ್ಟವೂ ನಮ್ಮ ಪಾಲಿಗೆ ಸುಖಕರವೇ.

ಬೇಟೆಯ ಹವ್ಯಾಸ ಇರುವ ಜನ ಖುಷಿಯಾಗಿ ಕಾಡಿಗೆ ಹೋಗಿ ಅಲ್ಲಿ ಕಷ್ಟಗಳನ್ನೂ ಪ್ರಾಣಾಪಾಯಗಳನ್ನೂ ಏಕೆ ಸಹಿಸಿಕೊಳ್ಳುತ್ತಾರೆಂಬುದು ಆ ಹವ್ಯಾಸ ಇರದ ಮಂದಿಗೆ ಅರ್ಥವಾಗುವುದಿಲ್ಲ. ಈ ಆಯಾಸದಲ್ಲೂ ಎಂಥ ಖುಷಿ ಅಡಗಿರುತ್ತದೆಂಬುದನ್ನು ಬೇಟೆಗಾರರಷ್ಟೇ ಹೇಳಬಲ್ಲರು !

ತರಗತಿಯಲ್ಲಿ ಎಲ್ಲ ಹುಡುಗರೂ ಓದುತ್ತಾರೆ. ಕೆಲವರು ಮಾನವಿಕ ಮತ್ತು ಕಲಾವಿಷಯಗಳಲ್ಲಿ ಮುಂದಿದ್ದರೆ ಇನ್ನು ಕೆಲವರು ಗಣಿತದಲ್ಲಿ ಮತ್ತೆ ಕೆಲವರು ಚರಿತ್ರೆಯಲ್ಲಿ ಮುಂದಿರುತ್ತಾರೆ. ಯಾರಿಗೆ ಯಾವ ವಿಷಯದಲ್ಲಿ ಆಸಕ್ತಿಯಿರುತ್ತದೋ ಆ ವಿಷಯಕ್ಕೆ ಸಂಬಂಧಪಟ್ಟ ಪಾಠಗಳನ್ನು ಅರ್ಥಮಾಡಿಕೊಳ್ಳುವುದು, ನೆನಪಿಟ್ಟುಕೊಳ್ಳುವುದು ಅವರಿಗೆ ಸ್ವಲ್ಪವೂ ಕಷ್ಟವೆನಿಸುವುದಿಲ್ಲ. ಅಭಿರುಚಿಯೊಂದಿದ್ದರೆ ಸಾಕು, ಯಾವುದೇ ಕೆಲಸವನ್ನು ಅರ್ಥಮಾಡಿ ಮುಗಿಸಿದಂತೆಯೆ.

'ನಿಮಗೆ ನೀವು ಮಾಡುವ ಕೆಲಸದಲ್ಲಿ ಎಷ್ಟು ಆಸಕ್ತಿಯಿದೆ ?' ಈ ಪ್ರಶ್ನೆಗೆ ನೀವು ಕೊಡಬಹುದಾದ ಉತ್ತರದಲ್ಲಿ ನಿಮ್ಮ ಯಶಸ್ಸಿನ ಅಥವಾ ವಿಫಲತೆಯ ರಹಸ್ಯ ಅಡಗಿದೆ. ನೀವು ಅಂಗಡಿ ಇಟ್ಟು ವ್ಯಾಪಾರ ಮಾಡುವವರಾಗಿರಲಿ, ವಕೀಲರಾಗಿರಲಿ ಇಲ್ಲವೆ ಶಾಲೆಯಲ್ಲಿ ಮಕ್ಕಳಿಗೆ ಪಾಠ ಹೇಳುವ ಅಧ್ಯಾಪಕರಾಗಿರಲಿ ನಿಮ್ಮ ಕೆಲಸದಲ್ಲಿ ಅಭಿರುಚಿ ಇಟ್ಟುಕೊಳ್ಳದ ಹೊರತು ಸೈ ಎನಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಚಪ್ಪಲಿ ರಿಪೇರಿ ಮಾಡುವ ಇಬ್ಬರು ವ್ಯಕ್ತಿಗಳನ್ನು ನಾನು ಬಲ್ಲೆ. ಒಬ್ಬನಿಗೆ ತನ್ನ ಕೆಲಸದಲ್ಲಿ ಅಭಿರುಚಿ ಇಲ್ಲ, ಇನ್ನೊಬ್ಬನಿಗೆ ಉಂಟು. ನಾನು ಮೊದಲನೆಯವನ ಹತ್ತಿರ ಒಮ್ಮೆ ಚಪ್ಪಲಿ ಸರಿಮಾಡಿಸಿದೆ. ಅವನು ಕಿತ್ತುಹೋದ ಕಡೆ ಹೊಲಿದು ದುಡ್ಡು ತೆಗೆದುಕೊಂಡ. ಇನ್ನೊಮ್ಮೆ ನಾನು ಎರಡನೆಯವನ ಹತ್ತಿರ ಚಪ್ಪಲಿ ರಿಪೇರಿ ಮಾಡಿಸಿಕೊಳ್ಳಬೇಕಾಯಿತು. ಚಪ್ಪಲಿಯಿಂದ ನನಗೆ ಆಗುತ್ತಿದ್ದ ತೊಂದರೆಯನ್ನು ಕೇಳಿಕೊಂಡು ಅವನು ಹೊಲಿದ ಮೇಲೆ, ಹಿಮ್ಮಡಿಗೆ ಒಂದು ಕಬ್ಬಿಣದ ಸ್ಟಾರ್ ಹಾಕಿದರೆ ಅದು ತೊಂದರೆ ಕೊಡಲಾರದೆಂದು ಹೇಳಿ ಅದನ್ನು ಹಾಕಿದ್ದೆ ಅಲ್ಲದೆ ಇನ್ನೂ ಒಂದೆರಡು ಸಣ್ಣಪುಟ್ಟ ಪದಾರ್ಥಗಳನ್ನು ಹಾಕಿಕೊಟ್ಟ. ಅವನು ಕೇಳಿದ ಹಣ ನಾನು ಅಂದುಕೊಂಡದ್ದಕ್ಕಿಂತ ಸ್ವಲ್ಪ ಹೆಚ್ಚೇ ಆಗಿತ್ತು. ನಾನು ಸಂತೋಷದಿಂದಲೇ ಕೊಟ್ಟೆ. ಅವನಿಗೆ ನನ್ನಿಂದ ಹೆಚ್ಚು ಕೂಲಿ ಸಿಕ್ಕಿತ್ತು. ಕಾರಣ ಅವನಿಗೆ ತನ್ನ ಕೆಲಸದಲ್ಲಿ ತುಂಬಾ ಆಸಕ್ತಿಯಿತ್ತು.

ಇಬ್ಬರು ಟ್ರಾವೆಲಿಂಗ್ ಏಜೆಂಟರುಗಳು ನನ್ನ ಗಮನಕ್ಕೆ ಬಂದರು, ಒಬ್ಬನಿಗೆ ಉರ್ದು ಬರುತ್ತಿರಲಿಲ್ಲ, ಇನ್ನೊಬ್ಬನಿಗೆ ಹಿಂದಿ ಬರುತ್ತಿರಲಿಲ್ಲ. ಮೊದಲನೆಯವನಿಗೆ ಪ್ರವಾಸೋದ್ಯಮದಲ್ಲಿ ಅಭಿರುಚಿಯಿತ್ತು. ಉರ್ದು ಕಲಿಯದೆ ಹೋದಲ್ಲಿ ತಾನು ಕೆಲಸದಲ್ಲಿ ಪೂರ್ತಿ ಯಶಸ್ಸು ಪಡೆಯಲು ಸಾಧ್ಯವಿಲ್ಲವೆಂದು ಅವನಿಗೆ ಗೊತ್ತಾಯಿತು. ಅವನು ಎರಡು ಮೂರು ತಿಂಗಳು ಕಷ್ಟಪಟ್ಟು ವ್ಯವ

ಹಾರಕ್ಕೆ ಅಗತ್ಯವಾದಷ್ಟು ಉರ್ದು ಕಲಿತುಕೊಂಡ. ಎರಡನೆಯವನು ಬೇರೆ ಉದ್ಯೋಗವಿಲ್ಲದೆ ಟ್ರಾವೆಲಿಂಗ್ ಏಜೆಂಟನ ಉದ್ಯೋಗ ಹಿಡಿದಿದ್ದ, ಅವನು ಅಂಗಡಿ ಕೆಲಸ ಹುಡುಕುತ್ತಿದ್ದ. ಅದು ಸಿಕ್ಕೊಡನೆ ಈ ಕೆಲಸಕ್ಕೆ ಸಲಾಮು ಹೊಡೆಯೋಣವೆಂದಿದ್ದ. ಅನೇಕ ವರ್ಷಗಳಾದರೂ ಅವನಿಗೆ ಹಿಂದಿ ಕಲಿಯಲಾಗ ಲಿಲ್ಲ.

ಅಭಿರುಚಿ ನಮ್ಮ ಕಾರ್ಯದಕ್ಷತೆಯ ಮೇಲೂ ಪರಿಣಾಮ ಬೀರಬಲ್ಲದು. ನಮ್ಮ ಅಭಿರುಚಿಗೆ ವಿರುದ್ಧವಾದ ಕೆಲಸ ಒಂದು ಗಂಟೆಯಲ್ಲಿಯೆ ನಮಗೆ ಸುಸ್ತು ಉಂಟುಮಾಡಬಹುದು. ನಮ್ಮ ಅಭಿರುಚಿಗೆ ಅನುಗುಣವಾದ ಕೆಲಸದಲ್ಲಿ ಹದಿ ನಾರು ಗಂಟೆ ದುಡಿದರೂ ನಮಗೆ ದಣಿವಾಗದೆ ಹೋಗಬಹುದು, ಏಕೆಂದರೆ ಆ ಕೆಲಸದಲ್ಲಿ ನಾವು ಪರಿಶ್ರಮಪಡುವ ಅಗತ್ಯ ಬೀಳುವುದಿಲ್ಲ. ಆಟವಾಡುತ್ತಿದ್ದಂತೆ ಕೆಲಸ ಮುಗಿದುಹೋಗುವುದು.

ನಮಗೆ ಆಸಕ್ತಿ ಹುಟ್ಟಿಸುವಂತಹ ಪುಸ್ತಕ ಓದಬೇಕಾದರೆ ನಾವು ಮತ್ತೆ ಮತ್ತೆ ಗಡಿಯಾರದ ಕಡೆ ನೋಡುವುದಿಲ್ಲ. ನಮಗೆ ಇಷ್ಟವಾದ ನಾಟಕ ನೋಡು ತ್ತಿರಬೇಕಾದರೆ ರಂಗಮಂದಿರದಲ್ಲಿರುವ ಒರಟು ಕುರ್ಚಿಯೂ ನಮಗೆ ಒತ್ತುವು ದಿಲ್ಲ, ಸುಖಾಸನದಂತಿರುತ್ತದೆ.

ಅಭಿರುಚಿಗೆ ಅನುಗುಣವಾದ ಉದ್ಯೋಗ ಇಲ್ಲವೆ ಕಾರ್ಯಕ್ಷೇತ್ರ ದೊರಕಿ ತೆಂದರೆ ಬೇರೆ ಮನೋರಂಜನೆಯ ಆವಶ್ಯಕತೆ ಉಂಟಾಗುವುದಿಲ್ಲ. ಆ ಕೆಲಸವೇ ಮನೋರಂಜನೆಯಾಗಿಬಿಡುತ್ತದೆ.

ಇದೆಲ್ಲ ಸರಿಯೆ. ಆದರೆ ನಾವು ಕಟುವಾಸ್ತವವನ್ನೂ ಕಡೆಗಣಿಸಲಾಗುವು ದಿಲ್ಲ. ಎಲ್ಲ ಜನರಿಗೂ ತಮ್ಮ ಅಭಿರುಚಿಗೆ ಅನುಗುಣವಾದ ಕೆಲಸ ಸಿಗಲು ಪ್ರಾಯಃ ಸಾಧ್ಯವಾಗಲಾರದು. ಮನೆಯಲ್ಲಿ ತಿನ್ನಲು ಹಿಟ್ಟಿಲ್ಲದಿರುವಾಗ ಅಭಿರುಚಿಗೆ ತಕ್ಕ ಕೆಲಸವೇ ಸಿಗಬೇಕೆಂದು ಯಾರಂತಾನೆ ಕಾದು ಕೂರಲಾಗುತ್ತದೆ ?

ತಮ್ಮ ಅಭಿರುಚಿಗೆ ಹೊಂದುವಂತಹ ಕೆಲಸಗಳನ್ನು ಪಡೆದುಕೊಂಡಿರುವ ಜನ ನಿಜವಾಗಿಯೂ ಅದೃಷ್ಟವಂತರು, ಯಾರಿಗೆ ಅಂಥ ಕೆಲಸ ದೊರಕಿಲ್ಲವೊ, ಅವರದೇ ದೊಡ್ಡ ಸಮಸ್ಯೆ. ಈ ಸಮಸ್ಯೆಗೆ ಒಂದೇ ಪರಿಹಾರ. ನಾವು ಕೈ ಹಿಡಿದ ಕೆಲಸದಲ್ಲೇ ಅಭಿರುಚಿಯನ್ನೂ ಆಸಕ್ತಿಯನ್ನೂ ಹುಟ್ಟಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಅಗತ್ಯಕ್ಕೆ ತಕ್ಕಂತೆ ಅಭಿರುಚಿಯನ್ನು ರೂಪಿಸಿಕೊಳ್ಳು ವುದು ಕಷ್ಟಸಾಧ್ಯವೇ ಸರಿ. ಆ ಕಷ್ಟವನ್ನು ನಿವಾರಿಸಿಕೊಳ್ಳುವ ಸಲುವಾಗಿ ನಮಗೆ ನಾವು ಈ ಪ್ರಶ್ನೆ ಹಾಕಿಕೊಳ್ಳಬೇಕು—

'ಈ ಕೆಲಸವನ್ನು ಬಿಟ್ಟರೆ ನಮಗೆ ಬೇರೆ ದಾರಿ ಇಲ್ಲವೆ ?'

ಒಂದುವೇಳೆ ದಾರಿ ಇದ್ದರೆ, ನಾವು ನಮ್ಮ ಅಭಿರುಚಿಗೆ ಅನುಗುಣವಾಗಿರುವ ಕೆಲಸ—ಅದರಿಂದ ಕಡಮೆ ಆದಾಯ ಬಂದರೂ ಚಿಂತೆಯಿಲ್ಲ—ಸಿಕ್ಕಬಹುದೆಂದರೆ ಅದನ್ನು ಹಿಡಿಯಬೇಕು. ಹಾಗಲ್ಲವೆ ಬೇರೆ ಉಪಾಯ ಇಲ್ಲದಿದ್ದಲ್ಲಿ ಪಾಲಿಗೆ ಬಂದದ್ದೆ ಪಂಚಾಮೃತವೆಂದು ಹಿಡಿದ ಕೆಲಸದಲ್ಲಿ ಅಭಿರುಚಿಯನ್ನು ರೂಢಿಸಿಕೊಳ್ಳಬೇಕು.

ಓವಿಡ್ ಹೀಗೆ ಹೇಳುತ್ತಾನೆ—'ಸಂತೋಷದಿಂದ ಎತ್ತಿದರೆ ಎಂಥ ಭಾರವಾದರೂ ಹಗುರವೆನಿಸುತ್ತದೆ.'

ತನ್ನ ಕೆಲಸವನ್ನು ಅಭಿರುಚಿಗೆ ತಕ್ಕಂತೆ ಮಾರ್ಪಡಿಸಿಕೊಳ್ಳುವವನೇ ಬುದ್ಧಿವಂತ. ಅದನ್ನು ಬಿಟ್ಟು ಅದೃಷ್ಟವನ್ನು ಹಳಿಯುವವನು, ತಲೆತುರಿಸಿಕೊಳ್ಳುವವನು ಶತಮೂರ್ಖ.

ಕೆಲಸದಲ್ಲಿ ಅಭಿರುಚಿಯನ್ನು ಬೆಳೆಸಿಕೊಳ್ಳದೆಹೋದರೆ ಅದರಿಂದ ನಮ್ಮ ಆರೋಗ್ಯ ಮತ್ತು ಏಳಿಗೆ ಎರಡಕ್ಕೂ ಕುತ್ತು.

ಹೇಗೆ ?

ನಮ್ಮ ಕೆಲಸವನ್ನು ಬಲವಂತವಾಗಿ ಇಲ್ಲವೆ ಬೇಕಾಬಿಟ್ಟಿಯಾಗಿ ಮಾಡುತ್ತಾ ಹೋದರೆ ಮುಖದಲ್ಲಿ ನಗೆ ಮಾಯವಾಗುತ್ತದೆ. ಸಿಟ್ಟಿಗೇಳುವ, ಮೈಪರಚಿಕೊಳ್ಳುವ ಅಭ್ಯಾಸ ನಮ್ಮಲ್ಲಿ ಮನೆಮಾಡುತ್ತದೆ. ಇದು ನಮ್ಮ ಆರೋಗ್ಯಕ್ಕೆ ತುಂಬ ಹಾನಿಕರ. ನಾವು ಮನಸ್ಸಿಟ್ಟು ಆ ಕೆಲಸ ಮಾಡುತ್ತಿರುವುದಿಲ್ಲವಾದ್ದರಿಂದ ಅದನ್ನು ಇನ್ನೂ ಸ್ವಲ್ಪ ಹೊತ್ತು ತಳ್ಳೋಣ ಅನಿಸುತ್ತಿರುತ್ತದೆ. ಇದೇ ಚಾಳಿ ಬೆಳೆದಂತೆಲ್ಲ ಕೆಲಸ ಕದಿಯುವುದು, ಮುಂದೆ ಹಾಕುವುದು ಅಭ್ಯಾಸವಾಗಿ ಹೋಗುತ್ತದೆ. ಇದು ನಮ್ಮ ಏಳಿಗೆಯ ಹಾದಿಯಲ್ಲಿ ದೊಡ್ಡ ಅಡ್ಡಗಲ್ಲು.

ಅನಿವಾರ್ಯವೆನಿಸಿದ ಕೆಲಸದ ವಿರುದ್ಧ, ಅದಿಲ್ಲದೆ ನಡೆಯುವುದಿಲ್ಲ ಎಂಬರಿವಿದ್ದಾಗ, ನಾವು ಆಸಕ್ತಿ ತೋರಿಸದೆ ಹೋದಲ್ಲಿ ಒಬ್ಬ ದಾರ್ಶನಿಕ ಹೇಳುವಂತೆ—'ನಮ್ಮ ಬದುಕಿನೊಡನೆ ನಾವೇ ಜಗಳ ಕಟ್ಟಿಕೊಂಡ ಹಾಗಾಗುತ್ತದೆ.'




೨

# ಕುಂಟುಮಾತಿಗೊಂದು ದಂಟುಕೋಲು

"ಆಮೇಲೆ ನಾನು ಅಲ್ಲಿಗೆ ಹೋದೆ, ಆಮೇಲೆ ನೋಡ್ತೀನಿ, ಮನೇಲಿ ಹೆಂಡತಿ ಇಲ್ಲ. ಆಮೇಲೆ ಯೋಚನೆ ಮಾಡ್ದೆ, ಹೊಟೇಲಿಗೆ ಹೋಗಿ ಊಟ ಮಾಡೋಣ ಅಂತ ಅಲ್ಲಿಂದ ಬಂದೆ. ಆಮೇಲೆ ಸ್ವಲ್ಪ ಹಣ್ಣು ತಗೊಳ್ಳೋಣ ಅಂತ ಅಂದುಕೊಂಡೆ. ಆಮೇಲೆ ಯೋಚಿಸಿದೆ. ಆಮೇಲೆ....ಆಮೇಲೆ...."

ಒಂದುವೇಳೆ ಆತನನ್ನು ತಡೆದು ನಿಲ್ಲಿಸಿ ಮತ್ತೆ ಮತ್ತೆ ಅನ್ನುವ ಈ 'ಆಮೇಲೆ' ಅನ್ನುವುದಕ್ಕೆ ಅರ್ಥ ಏನು ಎಂದು ಕೇಳಿದರೆ ಅವನು ಪ್ರಶ್ನೆ ಮಾಡಿದವನನ್ನೇ 'ಯಾವ ಆಮೇಲೆ' ಅಂತ ಚಕಿತನಾಗಿ ಕೇಳಬಹುದು. ಈ ಆಮೇಲೆ ಎಂಬುದು ತನ್ನ ಕುಂಟುಮಾತಿಗೊಂದು ಊರುಗೋಲು ಎಂಬುದು ಅವನಿಗೇ ಗೊತ್ತಿರುವುದಿಲ್ಲ. ಪಾರಸಿ ಭಾಷೆಯಲ್ಲಿ ಇದಕ್ಕೆ 'ತಕಿಯಾಕಲಾಂ' ಎನ್ನುತ್ತಾರೆ. 'ತಕಿಯಾ' ಅಂದರೆ ಆಶ್ರಯ ಹಾಗೂ 'ಕಲಾಂ' ಎಂದರೆ ಮಾತು ಎಂದರ್ಥ. ಒಟ್ಟಾರೆಯಾಗಿ 'ಮಾತಿಗೊಂದು ಆಶ್ರಯ' ಎಂಬುದಾಗಿ ಗ್ರಹಿಸಬಹುದು.

ನಮ್ಮ ಆಲೋಚನೆಯ ಹರಿವು ನಿಂತುಬಿಟ್ಟಾಗ, ಶಬ್ದಗಳು ಸರಿಯಾಗಿ ಜೋಡಣೆಯಾಗದೆ ಹೋದರೆ, ಆಗ ಎಲ್ಲ ಸ್ಥಳಗಳಲ್ಲೂ ಹೊಂದುವಂತಹ ಯಾವುದಾದರೂ ಒಂದು ಪದದ ತೀವ್ರ ಅಗತ್ಯ ಅನುಭವಕ್ಕೆ ಬರುತ್ತದೆ. ಯಾವುದೇ ಹೆಚ್ಚು ಪ್ರಯತ್ನವಿಲ್ಲದೆಯೆ ಇಂಥ ಪದ ನಮಗೆ ಸಿಕ್ಕಿಬಿಡುತ್ತದೆ. ನಮ್ಮ ಆಜು ಬಾಜಿನಲ್ಲಿ ಕಿವಿಯ ಮೇಲೆ ಪದೇಪದೇ ಬೀಳುತ್ತಿರುವ, ನಮ್ಮ ಮೇಲೆ ಪ್ರಭಾವ ಉಂಟುಮಾಡುವ ಯಾವುದೇ ಪದವನ್ನು ಅನಾಯಾಸವಾಗಿ ತೆಗೆದುಕೊಂಡುಬಿಡುತ್ತೇವೆ.

ಈಗಾಗಲೇ ಹೇಳಿದಂತೆ ಇಂಥ ಪದ ನಮ್ಮ ಮಾತು ಕುಂಟತೊಡಗಿದಾಗ ದಂಟುಕೋಲಾಗಿ ನೆರವಾಗುತ್ತದೆ. ಸ್ವಸ್ಥವಾಗಿ ಕಾಲುಗಳು ಇರುವವನಿಗೆ ಊರುಗೋಲಿನ ಆವಶ್ಯಕತೆ ಹೇಗೆ ಕಂಡುಬರುವುದಿಲ್ಲವೋ, ಹಾಗೆಯೆ ಸಮೃದ್ಧವಾದ ಪದಸಂಪತ್ತು ಇರುವವರಿಗೆ ಈ ಬಗೆಯ ಆಶ್ರಯಪದಗಳ ಅಗತ್ಯ ಇರುವುದಿಲ್ಲ. ಅಂದಮಾತ್ರಕ್ಕೆ ಸಮೃದ್ಧವಾದ ಶಬ್ದಸಂಪತ್ತನ್ನು ಹೊಂದಿರುವ ವ್ಯಕ್ತಿಗೆ ಆಶ್ರಯಪದಗಳು ಬೇಡವೇಬೇಡ ಎಂದು ಹೇಳಲಾಗುವುದಿಲ್ಲ. ಶಬ್ದಸಂಪತ್ತು ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳಿಗೂ ಒಂದು ಮಿತಿ ಇರುವುದು ಸಹಜ ತಾನೆ. ಯಾವುದೇ ಆಶ್ರಯಪದದ ನೆರವಿಲ್ಲದೆ ನಿರರ್ಗಳವಾಗಿ ಮಾತನಾಡುವುದಾದರೂ ಹೇಗೆ? ಒಂದಂತೂ ನಿಜ. ಶ್ರೀಮಂತ ಪದಸಂಪತ್ತಿನ ಬಳಕೆಯ ಸೌಲಭ್ಯ ಹೊಂದಿರುವವರು ಬೇರೆಯವರಿಗೆ ಹೋಲಿಸಿದಂತೆ ಕಡಮೆ ಪ್ರಮಾಣದಲ್ಲಿ ಆಶ್ರಯ ಪದಗಳ ಮೊರೆಹೋಗುತ್ತಾರೆ.

ಆಶ್ರಯಪದಗಳಲ್ಲಿ ಬೈಯ್ಗಳೂ ಇರುತ್ತವೆ. ದೇವರ ನಾಮಸ್ಮರಣೆಯೆ ಅಲ್ಲದೆ ಮುಖ ಕೈಬಾಯಿ ತಿರುಗಿಸುವುದೂ (ಅಂಗಚಲನೆ) ಇರುತ್ತದೆ. ಸರಿಯಾದ ವೇಳೆಯಲ್ಲಿ ಯಾವ ಶಬ್ದ ಅಥವಾ ಕ್ರಿಯೆ ನಮ್ಮ ಮಾತಿನ ಹರಿವಿಗೆ ನೆರವಾಗಿ ಬಂದು ನಿಲ್ಲುತ್ತದೊ ಅದೇ ನಮ್ಮ ಮಾತಿಗೆ ಊರುಗೋಲಾಗಿ ಪರಿಣಮಿಸುತ್ತದೆ.

ಇಂಥ ಯಾವುದೇ ಆಶ್ರಯದ ಮಾತನ್ನು ಮೊದಲು ಬಳಸುವುದು ಬೇರೆಯವರನ್ನು ತಮ್ಮ ಪ್ರಭಾವ ವಲಯದಲ್ಲಿ ಸೆಳೆದುಕೊಳ್ಳುವ ಉದ್ದೇಶದಿಂದ. ಆದರೆ ಕ್ರಮೇಣ, ಇಂಥ ಪದದ ಬಳಕೆಯ ವ್ಯಾಪ್ತಿ ಹೆಚ್ಚಾದಷ್ಟೂ, ಅದರ ಪರಿಣಾಮ ಕಡಮೆಯಾಗುತ್ತಾ ಹೋಗುತ್ತದೆ. ಈ ಪರಿಣಾಮ ಕಡಮೆಯಾಗುತ್ತಾ ಹೋದಂತೆ ದಂಟುಕೋಲು ಪದ ನಿಸ್ಸತ್ವಗೊಂಡು ಒಬ್ಬ ವ್ಯಕ್ತಿಯ ಮಾತಿನ ಅನಿವಾರ್ಯ ಅಂಗವಾಗಿಬಿಡುತ್ತದೆ. ನಾವು ಮಾತನಾಡುವ ರೀತಿಯ ಬಗ್ಗೆ ನಾವೇ

ಸ್ವಲ್ಪ ತಾಳ್ಮೆಯಿಂದ ವಿಮರ್ಶಾತ್ಮಕವಾಗಿ ವಿಚಾರ ಮಾಡದೆಹೋದಲ್ಲಿ ಮುಂದೆ ಒಂದು ದಿನ ನಾವು ಮಾತನಾಡುವ ಪತ್ತು ಶಬ್ದಗಳಲ್ಲಿ ಆರು ಆಶ್ರಯಪದಗಳೇ ಆಗಿಬಿಟ್ಟರೂ ಆಶ್ಚರ್ಯಪಡಬೇಕಾಗಿಲ್ಲ.

ಆಶ್ರಯಪದಗಳ ವಿಚಾರವಾಗಿ ಸ್ವಲ್ಪ ಆಲೋಚನೆ ಮಾಡಿದರೆ, ಅವುಗಳನ್ನು ಬಳಸುವವರ ತಿಳಿವಳಿಕೆಯ ಮಟ್ಟ, ಅವರ ಸಾಮಾಜಿಕ ಇಲ್ಲವೆ ಮಾನಸಿಕ ಪರಿಸ್ಥಿತಿಗಳು ಅರಿವಿಗೆ ಬರುತ್ತವೆ. ಇದನ್ನು ಸ್ವಲ್ಪ ಕ್ರಮವಾಗಿ ಅಧ್ಯಯನ ಮಾಡಿ ನನಗೆ ಕಂಡುಬಂದ ಅಂಶಗಳ ಕೆಲವು ಕಿರುನೋಟಗಳನ್ನು ಈ ಮುಂದೆ ಕೊಡುತ್ತಿದ್ದೇನೆ.

ಒಬ್ಬ ಹೆಂಗಸು 'ಅಯ್ಯೋ ದೇವರೆ' ಅಥವಾ 'ಅಬ್ಬಾ' ಎಂಬ ಆಶ್ರಯ ಪದಗಳನ್ನು ಮೊತ್ತಮೊದಲಿಗೆ ಯಾವ ರೀತಿಯಲ್ಲಿ ಉಪಯೋಗಿಸಿರಬಹುದೆಂಬುದನ್ನು ಗಮನಿಸಿ.

'ನಾನು ಮೆಟ್ಟಿಲು ಮೇಲೆ ಹತ್ತಿದೆ. ಅಬ್ಬಾ ! ಅಲ್ಲೊಂದು ಹಾವು ಮಲಗಿತ್ತು.'

ಹಾವು ಮತ್ತು ಹಾವಿನ ವಿಷಯ ಎರಡೂ ಮೈ ನಡುಗಿಸುವಂತಹವೇ. ಆದರೆ ಒಂದ. ಬಾರಿ ಹೆದರಿಕೆಯ ಸೂಚಕವಾಗಿ ಬಂದ ಈ 'ಅಯ್ಯೋ ದೇವರೆ', 'ರಾಮರಾಮ', 'ಅಬ್ಬಾ' ಎಂಬ ರೀತಿಯ ಪದಗಳು ಬರುಬರುತ್ತಾ ಅವಳ ಮಾತಿನ ಅವಿಭಾಜ್ಯ ಅಂಗಗಳಾಗಿಬಿಡುತ್ತವೆ. ಮೊದಲಿಗೆ ಅರ್ಥವತ್ತಾಗಿದ್ದ ಮಾತು ಕ್ರಮೇಣ ಅರ್ಥ ಕಳೆದುಕೊಂಡುಬಿಡುತ್ತದೆ. ಹಾಗೆಯೆ ಅಭ್ಯಾಸಮಾಡಿಕೊಂಡ ಅವಳು ಮುಂದೆ ಅವುಗಳನ್ನು ಈ ರೀತಿ ಬಳಸುತ್ತಾಳೆ !

"ಅಬ್ಬಾ ! ಅಂಗಳದಲ್ಲಿ ಬಿಸಿಲು ಬಂತು."

"ಅಬ್ಬಾ ! ಈ ಮೂಟೆ ತುಂಬಾ ದೊಡ್ಡದು."

"ಅಬ್ಬಾ ! ಅದೆಷ್ಟು ಕೊಳೆ ಬಟ್ಟೆಗಳು."

ಒಂದುವೇಳೆ ಈ ಮೇಲಿನ ಮೂರು ವಾಕ್ಯಗಳಲ್ಲಿ 'ಅಬ್ಬಾ' ತೆಗೆದುಹಾಕಿಬಿಟ್ಟರೂ ಒಟ್ಟಾರೆ ಅರ್ಥಕ್ಕೇನೂ ಧಕ್ಕೆ ಉಂಟಾಗುವುದಿಲ್ಲ. ಆದರೆ ಈ ರೀತಿ ಅಭ್ಯಾಸ ಮಾಡಿಕೊಂಡ ಹೆಂಗಸು ವಾಕ್ಯದ ಉಳಿದ ಭಾಗವನ್ನು ಕೈಬಿಟ್ಟಾಳೆಯೆ ಹೊರತು 'ಅಬ್ಬಾ' ಎಂಬುದನ್ನು ದೂರ ಮಾಡಲಾರಳು.

ಇದೇ ಗುಂಪಿಗೆ ಸೇರಬಹುದಾದ ಇನ್ನು ಕೆಲವು ಪದಗಳು ಅಥವಾ ಪದವೃಂದಗಳು ಹೀಗಿವೆ—'ಅಯ್ಯೋ ಶಿವನೆ!' 'ದೇವರೆ ದೇವರೆ!' 'ಹಾಯ್ ಅಲ್ಲಾ ;' 'ಅದು ಸರಿ' 'ಅಂದಹಾಗೆ'

ಸಾಮಾನ್ಯವಾಗಿ ಅಶ್ಲೀಲ ರೀತಿಯಲ್ಲಿ ಇಲ್ಲವೆ ಕೆಳಮಟ್ಟದಲ್ಲಿ ಮಾತನಾಡುವ ವ್ಯಕ್ತಿಗಳ ಜೊತೆಯಲ್ಲಿ ವ್ಯವಹರಿಸುವವರ ಆಶ್ರಯಪದಗಳು ಸಹ ಹೆಚ್ಚು ಕಡಮೆ ಅಶ್ಲೀಲವಾಗಿ ಇಲ್ಲವೆ ಕೆಳಮಟ್ಟದ್ದಾಗಿ ಇರುತ್ತವೆ. ಹಾಗೆಯೇ ಒಬ್ಬ ವ್ಯಕ್ತಿ ಕವಿಯಾಗಿರಬಹುದು, ಮುಖಂಡನಾಗಿರಬಹುದು ಇಲ್ಲವೆ ಕಲಾವಿದನಾಗಿರಬಹುದು. ಇವರೆಲ್ಲ ತಮ್ಮನ್ನು ತಾವೇ ಕವಿ, ಮುಖಂಡ, ಕಲಾವಿದ ಎಂದೆಲ್ಲ ಕರೆದುಕೊಂಡು ಶ್ರೇಷ್ಠತೆಯನ್ನೂ ಹಿರಿಮೆಯನ್ನೂ ಆರೋಪಿಸಿಕೊಂಡು ತಮ್ಮಷ್ಟಕ್ಕೆ ತಾವೇ ಸಂತೋಷಪಟ್ಟುಕೊಳ್ಳುತ್ತಾರೆ. ಯಾರ ಬಳಿ ತಮ್ಮ ಸ್ವಂತ ವೈಶಿಷ್ಟ್ಯವನ್ನು ಹೊರಗೆಡವಲು ತಾವು ಗಂಡಸರೆಂಬ ಅಹಮಿಕೆಯನ್ನು ಬಿಟ್ಟು ಇನ್ನೇನೂ ಉಳಿದಿರುವುದಿಲ್ಲವೊ ಅವರು ಅದನ್ನೇ ಜಗತ್ತಿಗೆ ಜಾಹೀರುಪಡಿಸಿ ತಮ್ಮ ಅಹಂಭಾವನೆಯನ್ನು ತಣಿಸಿಕೊಳ್ಳುತ್ತಾರೆ. ಸಮಾಜದಲ್ಲಿ ಮಹಿಳೆಯರಿಗಿಂತ ಪುರುಷರಿಗೆ ಹೆಚ್ಚು ಸೌಲಭ್ಯಗಳು ದೊರಕಿರುವುದಂತೂ ಸ್ಪಷ್ಟ. ತಮ್ಮ ವಿಶೇಷ ಸವಲತ್ತುಗಳನ್ನು ಬಳಸಲೋಸುಗವೊ ಎಂಬಂತೆ ಅವರು ಅಶ್ಲೀಲವಾದ ಆಶ್ರಯಪದಗಳನ್ನು ಅವಲಂಬಿಸುವುದು ಕಂಡುಬರುತ್ತದೆ.

ಮೊದಲಿಗೆ ಇಂಥ ಜನ ತಮ್ಮ ಹಿರಿಮೆಯನ್ನು, ಶಕ್ತಿ ಸಾಮರ್ಥ್ಯಗಳನ್ನು ವ್ಯಕ್ತಪಡಿಸುವ ಹಿನ್ನೆಲೆಯಲ್ಲಿ ಲೈಂಗಿಕ ಆಶ್ರಯವುಳ್ಳ ಪದಗಳನ್ನೂ ಪದವೃಂದಗಳನ್ನೂ ಬಳಸುತ್ತಾರೆ. ಕ್ರಮೇಣ ಇದೇ ಅಭ್ಯಾಸವಾಗಿ ಅವರು ಮಾತುಮಾತಿಗೆ ಜೀವವಿರುವ ಇಲ್ಲವೆ ನಿರ್ಜೀವವಾದ ಪ್ರಾಣಿ–ಪದಾರ್ಥಗಳ ಬಗ್ಗೆ ಸಹ ಇಂಥ ಮಾತುಗಳ ಪ್ರಯೋಗ ಮಾಡಿ ತೃಪ್ತಿಪಟ್ಟುಕೊಳ್ಳುವರು. ಸ್ವಲ್ಪ ಕೆಳಮಟ್ಟದಲ್ಲಿ ಜನರು ಆಡುವ ಮಾತಿಗೆ ಕಿವಿಗೊಟ್ಟರೆ ಉದಾಹರಣೆಗಳು ವಿಪುಲವಾಗಿ ದೊರೆಯುತ್ತವೆ.

ವಿದ್ಯಾವಂತರು ಮತ್ತು ಸುಸಂಸ್ಕೃತರು ಆದ ಜನಗಳ ಜೊತೆ ಸಂಪರ್ಕ ಇಟ್ಟುಕೊಂಡಿರುವವರ ಬಾಯಲ್ಲಿ—'ಒಳ್ಳೆಯದು !' 'ಭಗವಂತ !' 'ಪರಂತು' 'ಒಳ್ಳೇ' 'ಛೆಛೆ' ಇಂಥ ಪ್ರಯೋಗಗಳು ಮತ್ತೆ ಮತ್ತೆ ಕಂಡುಬರುತ್ತವೆ.

ನನ್ನ ಪರಿಚಯದವರೊಬ್ಬರಿದ್ದಾರೆ. 'ಭಯಂಕರ' ಎಂಬುದು ಅವರ ಆಶ್ರಯ ಪದ. 'ಅವನು ಭಯಂಕರವಾಗಿ ಕೆಲಸ ಮಾಡುತ್ತಾನೆ' ಅಂತ ಅವರು ಅಂದರೆ ನಾನು 'ಅವನು ಚೆನ್ನಾಗಿ ಕೆಲಸಮಾಡುತ್ತಾನೆ' ಎಂಬ ಆಶಯವನ್ನು ಗ್ರಹಿಸುತ್ತೇನೆಯೆ ಹೊರತು 'ಅವನು ಇನ್ನೊಬ್ಬರಿಗೆ ಭಯ ಹುಟ್ಟಿಸುವಂತೆ ಕೆಲಸ ಮಾಡುತ್ತಾನೆ' ಎಂದು ಅರ್ಥಮಾಡಿಕೊಳ್ಳುವುದಿಲ್ಲ. ಅವರು 'ಭಯಂಕರ ಕಾದಂಬರಿ' ಅಂದರೆ ಅವರ ಆಶಯ 'ಸೊಗಸಾದ ಕಾದಂಬರಿ' ಎಂದಾಗಿರುತ್ತದೆ.

ಹೀಗೆಯೆ 'ಭಯಂಕರವಾಗಿ ಓದು', 'ಭಯಂಕರವಾದ ಮಳೆ' ಮುಂತಾದ ಮಾತು ಗಳಲ್ಲಿ ಅವರ ಆಶಯವನ್ನು ಮಾತ್ರ ಗ್ರಹಿಸುತ್ತೇನೆ. ನಾನು ಒಂದೆರಡು ಬಾರಿ ಅವರನ್ನು ಎಚ್ಚರಿಸಿದಾಗ, ಸ್ವಲ್ಪ ನಿಗಾವಹಿಸಿ ಮಾತನಾಡತೊಡಗಿದರು. ಅನಂತರ 'ಭಯಂಕರ' ಗೊತ್ತಿಲ್ಲದಂತೆಯೆ ತಲೆಹಾಕಿತು. ಅದು ಅವರ ಗಮನಕ್ಕೆ ಬಂದೊಡ ನೆಯೆ ಪುನಃ 'ಭಯಂಕರ' ಅಂದರೆ ತಮ್ಮ ಆಶಯ ಏನೆಂದು ಸಮಜಾಯಿಷಿ ನೀಡತೊಡಗಿದರು. ಆಗ ನಾನು ಅವರ ಮಾತಿಗೆ ಅಡ್ಡಬಂದು ಹೇಳಿದೆ-- 'ನೀವೇನೂ ಹೆಚ್ಚು ತಲೆಗೆ ಹಾಕಿಕೊಳ್ಳದೆ ಮಾತಾಡುತ್ತಾ ಹೋಗಿ. ನಿಮ್ಮ ಈ 'ಭಯಂಕರ' ಪದವನ್ನು ನಾನು ಎಂದೂ ಭಯಂಕರವಾಗಿ ಗ್ರಹಿಸಿಯೆ ಇಲ್ಲ.'

ಸಿನೆಮಾ ಪ್ರೇಮಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಹೇಳುವುದಾದರೆ ಸಿನೆಮಾ ನಾಯಕ-ನಾಯಕಿಯರು ಅಥವಾ ಇನ್ನಾವುದೇ ಪಾತ್ರದ ಬಾಯಿಂದ ಹೊರಡುವ ಆಶ್ರಯಪದಗಳೆಂದರೆ ಅವರಿಗೆ ತುಂಬ ಅಚ್ಚುಮೆಚ್ಚು. ಈ ವರ್ಗದ ಜನರ ಬಾಯಲ್ಲಿ ಇಂಥ ಆಶ್ರಯಪದಗಳು ಬಹು ಸುಲಭವಾಗಿ ಜಾಗಪಡೆದು ಕೊಂಡುಬಿಡುತ್ತವೆ. ಉದಾಹರಣೆಗೆ 'ಹಂಗ್ಹೇಳು ಮತ್ತೆ', 'ನಂಗೊತ್ತಿಲ್ವಾ ಬುಡು,' 'ಕನೆಕ್ಷನ್ನು'. 'ಆಯ್ಯಯ್ಯೋ ಬಿಡ್ರಪ್ಪೊ' ಇತ್ಯಾದಿ.

ಕೆಲವು ಆಶ್ರಯಪದಗಳು ಒಬ್ಬ ನಿರ್ದಿಷ್ಟ ವ್ಯಕ್ತಿಯ ಮಾನಸಿಕ ಸ್ಥಿತಿಯನ್ನು ಹೊರಗೆಡಹುತ್ತವೆ. ಅದರ ಜೊತೆಯಲ್ಲೆ ಆ ವ್ಯಕ್ತಿಯ ಹಿಂದಿನ ಬದುಕಿನ ಮೇಲೆಯೂ ಬೆಳಕು ಚೆಲ್ಲುತ್ತವೆ.

'ಸ್ವಲ್ಪ' ಎಂಬುದು ಇಂಥ ಒಂದು ಪದ. ಸಾಮಾನ್ಯವಾಗಿ ಹತಾಶರಾದ ಅಥವಾ ದೀನರಾದ ಜನ ಇದನ್ನು ಹೆಚ್ಚಾಗಿ ಬಳಸುತ್ತಾರೆ. ಅವರು ಯಾವುದೇ ಸ್ಥಾನಮಾನಕ್ಕೆ ಹೋಗಿದ್ದರೇನಂತೆ, ಯಾರಿಗಾದರೂ ಏನಾದರೂ ಆದೇಶ ಕೊಡ ಬೇಕಾದರೆ ತಮ್ಮ ಆದೇಶ ಪಾಲನೆಯಾಗುವುದೋ ಇಲ್ಲವೊ ಎಂಬ ಅಳುಕು ಅವ ರಲ್ಲಿ ಸದಾ ಮನೆಮಾಡಿರುತ್ತದೆ. ತಮ್ಮ ಈ ಹೊಯ್ದಾಟವನ್ನು ಅವರು ಈ 'ಸ್ವಲ್ಪ' ಎಂಬುದರ ಮೂಲಕ ಹೊರಕ್ಕೆ ಹಾಕುತ್ತಾರೆ. ಕೆಲವೊಮ್ಮೆ ಈ ಶಬ್ದದ ಬಳಕೆ ಮಾಡಿ ತಮ್ಮ ಆದೇಶದ ತೀವ್ರತೆಯನ್ನು ಮೆದುಗೊಳಿಸುತ್ತಾರೆ. ಉದಾ ಹರಣೆಗೆ,

"ಸ್ವಲ್ಪ ನೀರು ಕೊಡು."

"ಸ್ವಲ್ಪ ಚಾಪೆ ಹಾಸಬೇಕಾಗಿತ್ತು."

ಅಭ್ಯಾಸವಾಗಿ ಹೋದಮೇಲೆ ಇದರ ಪ್ರಯೋಗ ಹೀಗಾಗುವುದುಂಟು—

"ಸ್ವಲ್ಪ ಊಟ ಮಾಡಿ ಬರುತ್ತೇನೆ."

"ಸ್ವಲ್ಪ ಹತ್ತು ರೂಪಾಯಿ ಬೇಕಾಗಿತ್ತು."

ಇಂತೆಡೆಗಳಲ್ಲಿ 'ಸ್ವಲ್ಪ' ಎಂಬುದಕ್ಕೆ ವಿಶೇಷ ಅರ್ಥವೇನಿಲ್ಲ. ಒಂದು ವೇಳೆ ಇಂಥ ಮಂದಿ ನಿಜವಾಗಲೂ 'ಸ್ವಲ್ಪ' ಎಂಬ ಅರ್ಥದಲ್ಲೇ ಪದವನ್ನು ಬಳಸಬೇಕಾದರೆ ಆ ಪದವನ್ನು ಪ್ರಯೋಗ ಮಾಡುವುದರ ಜೊತೆಯಲ್ಲೇ ತಮ್ಮ ಹೆಬ್ಬೆರಳು, ತೋರುಬೆರಳು ಹಾಗೂ ಮಧ್ಯದ ಬೆರಳನ್ನು ಒಟ್ಟಿಗೆ ಸೇರಿಸುವುದರ ಮೂಲಕ ತಮ್ಮ 'ಸ್ವಲ್ಪ'ವನ್ನು ಹೆಚ್ಚು ಅರ್ಥಪೂರ್ಣವನ್ನಾಗಿ ಮಾಡುತ್ತಾರೆ. ಬಹುಶಃ ಆ ಮೂರು ಬೆರಳುಗಳನ್ನು ಒಟ್ಟಿಗೆ ಸೇರಿಸಿದಾಗ ಅವುಗಳ ನಡುವೆ ಎಷ್ಟು ಜಾಗ ಕಂಡುಬರುತ್ತದೊ ಅಷ್ಟು ಮಾತ್ರ ಎಂಬಂತೆ.

ಈ 'ಅಂದರೆ' ಎಂಬ ರೀತಿಯ ಪದದ ಬಳಕೆಯನ್ನು ಪದೇ ಪದೇ ಮಾಡುವವರ ಚರಿತ್ರೆಯ ಬಗೆಗೆ ಸಹ ಸ್ಪಷ್ಟವಾಗಿ ಅಂದಾಜು ಮಾಡಬಹುದು. ಬಹುಶಃ ಅವರ ಬದುಕಿನಲ್ಲಿ ಮೊದಲು ಕಡಮೆ ತಿಳಿವಳಿಕೆಯುವರ ಜೊತೆಯಲ್ಲಿ ಏಗುವ ಸಂದರ್ಭ ಉಂಟಾಗಿದ್ದಿರಬಹುದು. ಉದಾಹರಣೆಗೆ, ಅವರ ಹತ್ತಿರ ಒಬ್ಬ ಪೆದ್ದ ಜವಾನ ಇದ್ದ ಎಂದಿಟ್ಟುಕೊಳ್ಳಿ. ಅವನಿ ಏನು ಹೇಳಬೇಕಾದರೂ ಮತ್ತೆ ಮತ್ತೆ ವಿವರಿಸಿ, ಸ್ಪಷ್ಟಪಡಿಸಿ ಹೇಳಬೇಕಾದುದು ಅಗತ್ಯವಾಗುತ್ತದಲ್ಲವೆ. ಆಗ ಅಂಟಿದ ಅಭ್ಯಾಸ ಸುಲಭವಾಗಿ ಹೇಗೆ ತಾನೆ ಬಿಟ್ಟುಹೋಗಬಲ್ಲದು ! ಅವರ ಜೊತೆಯಲ್ಲಿರುವವರು ಸರಿಯಾಗಿ ಅರ್ಥಮಾಡಿಕೊಂಡಿದ್ದರೂ 'ಅಂದರೆ', 'ಅರ್ಥಾತ್' ಎಂಬ ಪದಗಳನ್ನು ಬಳಸಿ ವಿವರಿಸದೆ ಹೋದರೆ ಅವರಿಗೆ ಖಂಡಿತ ಸಮಾಧಾನವಾಗುವುದಿಲ್ಲ.

'ಗೊತ್ತಾಯ್ತಾ' ಎಂಬ ಪದವನ್ನು ಮತ್ತೆ ಮತ್ತೆ ಬಳಸುವಂತಹ ವ್ಯಕ್ತಿಯ ಬದುಕಿನಲ್ಲಿ ಸಾಮಾನ್ಯವಾಗಿ ಆತನ ಮಾತುಗಳಿಗೆ ಕಿವಿಗೊಡದಿರುವ ಜನರ ಸಹವಾಸ ಉಂಟಾಗಿತ್ತೆಂದು ಊಹಿಸಬಹುದು. ತನ್ನ ಮಾತನ್ನು ಕೇಳುಗರು ಅರ್ಥಮಾಡಿಕೊಳ್ಳುತ್ತಿದ್ದಾರೊ ಇಲ್ಲವೊ ಎಂಬ ಅನುಮಾನ ಆತನನ್ನು ಮತ್ತೆ ಮತ್ತೆ ಕಾಡುತ್ತಿರುತ್ತದೆ. ತನ್ನ ಮಾತನ್ನು ಎದುರಿಗೆ ಇರುವವರು ಕೇಳಿಸಿಕೊಳ್ಳುತ್ತಿದ್ದಾರೊ ಇಲ್ಲವೊ ಎಂಬುದನ್ನು ದೃಢಪಡಿಸಿಕೊಳ್ಳಲು ಆತ ಪದೇ ಪದೇ 'ಗೊತ್ತಾಯ್ತಾ', 'ಅರ್ಥವಾಯ್ತಾ' ಅಂತ ಕೇಳುತ್ತಿರುತ್ತಾನೆ. ಕೆಲವು ವೇಳೆ ತಾನು ಹೇಳಿದ್ದು ಇತರರಿಗೆ ಅರ್ಥವಾಯಿತೋ ಇಲ್ಲವೊ ಎಂಬುದನ್ನು ಖಚಿತಪಡಿಸಿಕೊಳ್ಳಲು 'ಅಲ್ಲವೆ' ಎಂಬ ಪದ ಸಹ ಬಳಕೆ ಆಗುವುದುಂಟು.

'ನೋಡಿ ಇಲ್ಲಿ,' 'ಸ್ವಲ್ಪ ನೋಡಿ' ಇಂಥ ಪದಗಳ ಪ್ರಯೋಗ ಎದುರಿಗಿರುವ ಜನಗಳ ಗಮನವನ್ನು ನಮ್ಮ ಕಡೆಗೆ ಸೆಳೆಯುವ ಉದ್ದೇಶದಿಂದ ಆಗುತ್ತದೆ.

ನಾವು ಮುಂದೆ ಹೇಳುವ ಮಾತನ್ನು ಅವರು ಕೇಳಿಸಿಕೊಳ್ಳಲು ಸಿದ್ಧವಾಗಿರಲಿ ಎಂಬ ದೃಷ್ಟಿಯಿಂದ ಇಂಥ ಮಾತುಗಳ ಬಳಕೆಯಾಗುವುದುಂಟು. ಆದರೆ ಇದು ಒಮ್ಮೆ ಅಭ್ಯಾಸವಾಯಿತೆಂದರೆ ಫೋನಿನಲ್ಲಿ ಮಾತನಾಡಬೇಕಾದರೆ ಕೂಡ 'ನೋಡಿ ಇಲ್ಲಿ' ಎಂಬ ಪ್ರಯೋಗ ಮಾಡುವುದನ್ನು ನಾವು ಮರೆಯುವುದಿಲ್ಲ.

'ಅದೇನೊ ಅಂತಾರಲ್ಲ', 'ಅದೇನಂತಾರೆ ಹೇಳಿ', 'ಈಗ ತಾನೆ ಅಂದನಲ್ಲ' ಇಂಥ ಪದವೃಂದಗಳನ್ನು ಮತ್ತೆ ಮತ್ತೆ ಬಳಸುವ ಜನ ಸಾಧಾರಣವಾಗಿ ಮರೆಯುವ ಸ್ವಭಾವದವರು. ಮಾತನಾಡುತ್ತಿರುವಾಗಲೇ ಅವರು ತಾವು ಏನನ್ನು ಆಡುತ್ತಿದ್ದೇವೆಂದೇ ಮರೆತುಬಿಡುತ್ತಾರೆ. ತಾವು ಅದನ್ನು ಮತ್ತೆ ಜ್ಞಾಪಿಸಿಕೊಳ್ಳುವವರೆಗೆ ಕೇಳುಗರ ಗಮನವನ್ನು ಹಾಗೆಯೆ ಉಳಿಸಿಕೊಳ್ಳುವ ಉದ್ದೇಶದಿಂದ ಅವರು ಇಂಥ ಆಶ್ರಯಪದಗಳನ್ನು ಮತ್ತೆ ಮತ್ತೆ ಬಳಕೆ ಮಾಡುತ್ತಾರೆ.

ಮತ್ತೆ ಮತ್ತೆ 'ಸ್ವಾಮಿ', 'ಸಾಹೇಬರೆ', 'ಬುದ್ಧಿ' ಎಂಬ ಪದಗಳನ್ನು ಪ್ರಯೋಗ ಮಾಡುವವರು ತಮ್ಮ ಬದುಕಿನ ಮೊದಲ ಹಂತಗಳಲ್ಲಿ ಖಂಡಿತ ಸಾಹೇಬರಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಮೊದಲಿಗೆ ಬೇರೆಯವರನ್ನು ಹಾಗೆ ಕರೆಯುವುದು ಅವರಿಗೆ ಅಭ್ಯಾಸವಾಗಿರುತ್ತದೆ. ಅದೇ ವಿನಯವಂತಿಕೆ ಅವರು ಸಾಹೇಬರಾದ ಮೇಲೂ ಕಾಣಿಸಿಕೊಳ್ಳದೆ ಬಿಡುವುದಿಲ್ಲ.

'ಖಂಡಿತವಾಗಿಯೂ', 'ಸತ್ಯವಾಗಿ', 'ನಿಜವಾಗಿ' ಮುಂತಾದ ಆಶ್ರಯ ಪದಗಳನ್ನು ಬಳಸುವ ಜನರಿಗೆ ತಮ್ಮ ಮಾತುಗಳನ್ನು ಇತರರು ನಂಬುತ್ತಾರೋ ಇಲ್ಲವೋ ಎಂಬ ವಿಚಾರದಲ್ಲಿ ಯಾವಾಗಲೂ ಅಳುಕು, ಸಂಶಯ ಮೂಡಿರುತ್ತದೆ. ಅಂಥ ಜನ ಯಾವಾಗಲೂ ಸುಳ್ಳು ಹೇಳಿ ತಮ್ಮ ನಂಬಿಕೆಯನ್ನು ಹಾಳು ಮಾಡಿಕೊಂಡಿರುತ್ತಾರೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ. ಪ್ರತಿಯೊಂದು ವೇಳೆಯಲ್ಲಿಯೂ ತಮ್ಮ ಮಾತಿನ ಸತ್ಯತೆಯನ್ನು ಸಾಬೀತುಪಡಿಸುವ ಸಲುವಾಗಿ ಅವರು ಇಂಥ ಆಶ್ರಯ ಪದಗಳ ಮೊರೆಹೋಗುತ್ತಾರೆ. ಕಡೆಗೆ ಅದು ಯಾವ ಮಟ್ಟವನ್ನು ತಲುಪುತ್ತದೆಂದರೆ ಅವರು ಆಮೇಲೆ ಯಾವ ಸುಳ್ಳನ್ನು ಸಹ 'ಖಂಡಿತವಾಗಿ', 'ಸತ್ಯವಾಗಿ' ಮಾತ್ರ ಹೇಳಬಲ್ಲವರಾಗಿರುತ್ತಾರೆ.

ಒಂದು ಪದ ಎಷ್ಟು ಚೆನ್ನಾಗಿದ್ದರೇನಂತೆ, ಅದು ಆಶ್ರಯಪದವಾದ ಕೂಡಲೇ ಅದರ ಸೊಬಗು ಮುರುಟಿಹೋಗುತ್ತದೆ. 'ಸಂತೋಷ' ಎಂಬುದು ಎಷ್ಟು ಸೊಗಸಾದ ಪದ! ಅದರೆ ನನ್ನ ಬಳಿ ಬರುವ ಒಬ್ಬ ಮಹನೀಯರು ಅದನ್ನು ಯಾವ ದುರ್ಗತಿಗೆ ತಂದಿದ್ದಾರೆ ಎಂಬುದಕ್ಕೆ ಮುಂದೆ ನೋಡಿ.

ನಾನು—'ನೋಡಿ, ಒಂದು ಹೊಸ ಪುಸ್ತಕ ಬಂದಿದೆ.'

2

ಉತ್ತರ—'ಸಂತೋಷ.'

ಮತ್ತೊಮ್ಮೆ ನಾನು—'ನಾನು ಈವತ್ತು ಊರಿಗೆ ಹೋಗುತ್ತಿದ್ದೇನೆ.'

ಉತ್ತರ—'ಸಂತೋಷ.'

ಮಗದೊಮ್ಮೆ ನಾನು—'ಇವತ್ತು ನನಗೆ ಹುಷಾರಿಲ್ಲ.'

ಅವರು ಚಕಿತರಾದರು. ಅಚ್ಚರಿಯಿಂದ ನನ್ನ ಮುಖ ನೋಡಿದರು. ಅರಿವಿಲ್ಲದಂತೆಯೇ ಅವರ ಬಾಯಿಂದ ಹೊರಬಿತ್ತು—'ಸಂತೋಷ.'

ನನ್ನ ಆರೋಗ್ಯದ ಬಗ್ಗೆ ಅವರು ಆತಂಕ ವ್ಯಕ್ತಪಡಿಸತೊಡಗಿದರು. ಆದರೆ ನನ್ನ ಅನಾರೋಗ್ಯದ ಬಗ್ಗೆ 'ಸಂತೋಷ' ವ್ಯಕ್ತಪಡಿಸಿದ್ದಕ್ಕೆ ಅವರು ಸ್ವಲ್ಪವೂ ಖೇದ ವ್ಯಕ್ತಪಡಿಸಲಿಲ್ಲ. ಅಚಾತುರ್ಯದ ಮಾತು ತಮ್ಮ ಬಾಯಿಂದ ಹೊರ ಬಿದ್ದಿದೆ ಎಂಬುದು ಅವರಿಗೆ ಅರಿವಾಗಿದ್ದರೆ ತಾನೆ ?

ಕೆಲವು ಮಂದಿ ಇಂಗ್ಲಿಷ್ ಸಿನಿಮಾ ನೋಡಿ ಅಥವಾ ಇಂಗ್ಲಿಷ್ ಮಾತ ನಾಡುವವರ ಸಂಪರ್ಕದ ದೆಸೆಯಿಂದಾಗಿ ಕೆಲವಾರು ಇಂಗ್ಲಿಷ್ ಪದಗಳ ತೆಕ್ಕೆಗೆ ಬೀಳುತ್ತಾರೆ. ಉದಾಹರಣೆಗೆ 'ವಂಡರ್‌ಫುಲ್', 'ಎಕ್ಸಾಕ್ಟ್‌ಲೀ', 'ಐಸೀ', 'ಓ ಮೈ ಗುಡ್‌ನೆಸ್', 'ಟೆರಿಬಲಿ' ಇತ್ಯಾದಿ.

ದೊಡ್ಡ ದೊಡ್ಡ ಹುದ್ದೆಗಳಲ್ಲಿರುವವರು ಅಥವಾ ಹಿರಿಯರು ಸಾಧಾರಣ ವಾಗಿ 'ಹೂಂ....ಹೂಂ', 'ಆಮೇಲೆ' ಮುಂತಾದ ಆಶ್ರಯ ಪದಗಳನ್ನು ಉಪ ಯೋಗಿಸುವುದುಂಟು. ಧಾರ್ಮಿಕ ವಾತಾವರಣದಲ್ಲಿರುವವರ ಬಾಯಿಂದ 'ರಾಮ ರಾಮ'. 'ಕೃಷ್ಣ', 'ಶಿವಶಿವ', 'ದೇವರು ದೊಡ್ಡವನು' ಮುಂತಾದ ಪದಗಳು ಕೇಳಿಬರುತ್ತಿರುತ್ತವೆ.

ಎಲ್ಲ ಆಶ್ರಯಪದಗಳನ್ನೂ ಲೆಕ್ಕಹಾಕುವುದು ಸಾಧ್ಯವಾಗುವುದಿಲ್ಲ. ಅವುಗಳು ಎಷ್ಟಿವೆಯೆಂಬುದನ್ನು ಅಂದಾಜು ಮಾಡಬೇಕಾದರೆ ಒಂದು ಉಪಾಯ ಮಾಡಬಹುದು—ಯಾವುದಾದರೂ ದೊಡ್ಡ ಶಬ್ದಕೋಶವನ್ನು ತೆಗೆದುಕೊಳ್ಳಿ. ಅದರಲ್ಲಿ ಕೊಟ್ಟಿರುವ ಪ್ರತಿಯೊಂದು ಪದವೂ ಆಶ್ರಯಪದವಾಗಬಹುದು. ಅಷ್ಟೇ ಅಲ್ಲ, ಕೋಶದಲ್ಲಿಲ್ಲದಿರುವಂಥದೂ ಆಗಬಲ್ಲದು.

ಮಾತಿನ ಮೇಲೆ ಒತ್ತನ್ನು ಹಾಕುವ ಉದ್ದೇಶದಿಂದ ಬಳಕೆ ಮಾಡುವ ಆಶ್ರಯಪದಗಳು ಸಾಕಷ್ಟು ಪ್ರಯೋಗವಾದ ಮೇಲೆ ನಿಸ್ಸತ್ವಗೊಳ್ಳುತ್ತವೆ. ಅವುಗಳನ್ನು ಉಪಯೋಗಿಸುವವರಿಗೂ ಈ ಅಂಶ ತಿಳಿಯದೆ ಹೋಗುವುದಿಲ್ಲ. ಆವಕ್ಕೆ ಮತ್ತೆ ಜೀವ ತುಂಬಲು ಜನ ಹೀಗೆ ಬಳಸುವುದುಂಟು.

'ತುಂಬಾ ಭಯಂಕರವಾಗಿತ್ತು' ಎಂಬುದರಿಂದ 'ತುಂಬಾ ಬ್‌ಭಯಂಕರ ವಾಗಿತ್ತು'

'ಹಾಳಾಗಿ ಹೋಯ್ತು' ಎಂಬುದರಿಂದ 'ಹ್‌ಹಾಳಾಗಿ ಹೋಯ್ತು'.

'ನೆಗೆದು ಬಿದ್ದುಹೋಯ್ತು' ಎಂಬುದರಿಂದ 'ನ್ನೆಗೆದು ಬಿದ್ದುಹೋಯ್ತು'.

'ಟೆರ್ರಿಬಲ್ ಇಟ್ ಇಸ್' ಎಂಬುದರಿಂದ 'ಟ್‌ಟೆರ್ರಿಬಲ್ ಇಟ್ ಇಸ್' ಇತ್ಯಾದಿ.

ಯಾವುದಾದರೂ ಪದವನ್ನು ಆಶ್ರಯವಾಗಿಟ್ಟುಕೊಂಡು ಮಾತನ್ನು ಬೆಳೆಸುವ ವಿಧಾನ ಹೇಗೆಂಬುದನ್ನು ಈವರೆಗೆ ನೋಡಿದ್ದಾಯಿತು. ಇನ್ನು ಕೆಲವು ಆಶ್ರಯವಿಧಾನಗಳು ಹೇಗಿರುತ್ತವೆಯೆಂದರೆ ಅವನ್ನು ನಾವು ಕಿವಿಯಿಂದ ಕೇಳಲಾಗುವುದಿಲ್ಲ, ಕೇವಲ ಕಣ್ಣಿನಿಂದ ನೋಡಬಹುದಷ್ಟೆ. ಈ ಲೇಖನದ ಮೊದಲಲ್ಲೇ ಈ ಬಗೆಯ ಆಶ್ರಯಗಳಿಗೆ 'ಅಂಗಚಲನೆ' ಎಂದು ಕರೆದಿರುವುದು ಸರಿಯಷ್ಟೆ.

ಅಂಗಚಲನೆಯನ್ನು ಆಶ್ರಯಪದಗಳ ಇಲ್ಲವೆ ಆಶ್ರಯ ವಿಧಾನಗಳ ಸಾಲಿನಲ್ಲಿ ಸೇರಿಸುವುದರಿಂದ ಕೆಲವರಿಗೆ ಅಚ್ಚರಿ ಉಂಟಾಗಬಹುದು. ಮಾತು ಕೈಕೊಟ್ಟಾಗ ಇನ್ನೊಂದು ಮಾತು (ಅದು ಆಮೇಲೆ ಸವಕಲಾಗುವುದು ಬೇರೆ ವಿಚಾರ !) ಅದಕ್ಕೆ ಊರುಗೋಲಾಗಬಲ್ಲದೆಂಬುದನ್ನು ಮಾತ್ರ ಅವರು ಒಪ್ಪಬಹುದು. ಆದರೆ ನನಗನಿಸುವಂತೆ ಮಾತು ಮರೆತಾಗ ಇಲ್ಲವೆ ಮಾತಿಗೆ ಪುಷ್ಟಿ ನೀಡುವ ಸಾಧನಗಳೆಲ್ಲವೂ ಆಶ್ರಯಗಳೇ. ಇದು ಮಾತೇ ಆಗಬೇಕೆಂದೇನಿಲ್ಲ. ಬೆರಳುಗಳ ತುದಿಯನ್ನು ಒಟ್ಟುಗೂಡಿಸಿ 'ಸ್ವಲ್ಪ' ಅಂತ ಹೇಗೆ ಹೇಳುತ್ತಾರೆಂಬುದನ್ನು ಈಗಾಗಲೇ ನಾವು ನೋಡಿದ್ದೇವೆ. ಅಂಥ ವಿಚಾರವನ್ನೇ ಈಗ ಸ್ವಲ್ಪ ವಿಸ್ತಾರವಾಗಿ ನೋಡೋಣ.

ಏನಾದರೂ 'ಇಲ್ಲ' ಎಂಬುದನ್ನು ಹೇಳಬೇಕಾದರೆ ಕೇವಲ ಬಾಯಿಂದ ಆ ಧ್ವನಿಗಳು ಹೊರಬಿದ್ದರೆ ಮಾತ್ರ ನಮ್ಮ ಆಶಯ ಪೂರ್ತಿಯಾದಂತಾಗುವುದಿಲ್ಲ. ಹೆಚ್ಚು ಸ್ಪಷ್ಟವಾಗಿ ಹೇಳಲು ಅಥವಾ 'ಇಲ್ಲ' ಎಂಬುದನ್ನು ಇನ್ನೂ ಪರಿಣಾಮಕಾರಿಯಾಗಿ ಹೇಳಲು ತಲೆಯನ್ನು ಎಡದಿಂದ ಬಲಕ್ಕೆ ಆಡಿಸುವುದು ಸಹ ಅಷ್ಟೇ ಅಗತ್ಯವೆಂದು ನಾವು ಭಾವಿಸುತ್ತೇವಲ್ಲವೆ. 'ಸಾಕು, ಇನ್ನು ತಿನ್ನೋದಕ್ಕಾಗೋದಿಲ್ಲ' ಅಂತ ಹೇಳಬೇಕಾದರೆ ಯಾವುದೇ ಪ್ರಯತ್ನವಿಲ್ಲದೆ ಕೈ ರಕ್ಷಣಾರ್ಥವಾಗಿ ಎಲೆಯ ಮೇಲೆ ಆಡುವುದನ್ನು ನಾವೆಲ್ಲ ಗಮನಿಸಿದ್ದೇವೆ. 'ಹೌದು' ಎಂದು ಹೇಳಬೇಕಾದರೆ ತಲೆಯನ್ನು ಮೇಲಿನಿಂದ ಕೆಳಕ್ಕೆ ಆಡಿಸುವುದು ಸಹ ಅಷ್ಟೇ ಆವಶ್ಯಕವೆಂದು ನಮಗೆ ಕಂಡುಬರುತ್ತದಷ್ಟೆ. ಹಾಗೆಯೇ 'ಅಲ್ಲಿ' ಎಂದು ಯಾರಿಗಾದರೂ ಸ್ಥಳ

ತೋರಿಸಬೇಕಾದರೆ ನಮ್ಮ ಕಣ್ಣುಗುಡ್ಡೆ ಆ ದಿಕ್ಕಿಗೆ ತಿರುಗುವುದರ ಜೊತೆಗೆ, ಬೆರಳು ಸಹ ಅತ್ತ ಕಡೆ ತೋರಿಸುತ್ತೇವಲ್ಲವೆ. ಇವೆಲ್ಲ ನಮಗೆ ಅರಿವಿಲ್ಲವೆಯೆ ನಡೆಯುತ್ತಿರುತ್ತವೆ. 'ಗುಂಡ'ಗೆ ಎಂದು ವಿವರಿಸಬೇಕಾದರೆ ನಮ್ಮ ಎರಡೂ ಕೈಗಳು ಅರ್ಧರ್ಧ ಗುಂಡನೆಯ ಆಕಾರಕ್ಕೆ ಬಂದು ಒಂದರಮೇಲೊಂದು ಸೇರಿ ಕೊಂಡು ಗೋಳಾಕೃತಿಯ ದೃಶ್ಯವನ್ನು ಕಲ್ಪಿಸಿಕೊಳ್ಳಲು ನೆರವಾಗುತ್ತವೆ.

ನಮ್ಮ ಮಾತಿನ ತೀವ್ರತೆಗೆ ಹೆಚ್ಚು ಒತ್ತಾಸೆ ಕೊಡಲು ಅಂಗಚಲನೆ ತುಂಬ ಆವಶ್ಯಕವಾದ ಕ್ರಿಯೆ ಎನಿಸುತ್ತದೆ. ನಾಟಕದಲ್ಲಿ ನೇಪಥ್ಯ ಸಂಗೀತಕ್ಕೆ ಯಾವ ಸ್ಥಾನವೊ ನಮ್ಮ ಮಾತಿನಲ್ಲಿ ಅಂಗಚಲನೆಗೆ ಅದೇ ಜಾಗ. ಆದರೆ ಸಹಜತೆಯ ಒಂದು ಎಲ್ಲೆಕಟ್ಟನ್ನು ಮೀರಿ ಅಂಗಚಲನೆ ಶುರುವಾಯಿತೆಂದರೆ ತಲೆನೋವು ಅಂಟಿಸಿಕೊಂಡಂತೆಯೆ. ಅದು ನೋಡುವವರಿಗೆ ಹಾಸ್ಯಾಸ್ಪದವೂ ಆಗಬಹುದು. ಮಾತನಾಡಬೇಕಾದರೆ ತಮಗೆ ಅರಿವಿಲ್ಲದೆಯೆ ಬಗೆಬಗೆಯ ಕಸರತ್ತುಗಳ ಮಾದರಿ ಯನ್ನು ತೋರಿಸುವ ಜನ ನಿಮ್ಮದೃಷ್ಟಿಗೆ ಬಿದ್ದಿರಬೇಕಲ್ಲವೆ.

ಪ್ರತಿಯೊಬ್ಬ ವ್ಯಕ್ತಿಗೂ ಏನಾದರೂ ಒಂದು ಇಂಥ ಆಶ್ರಯಪದ ಇಲ್ಲವೆ ಆಶ್ರಯ ವಿಧಾನ ಇರುವುದು ಸಹಜ. ಸಮೃದ್ಧವಾದ ಪದಸಂಪತ್ತನ್ನು ಹೊಂದಿ ರುವ ವ್ಯಕ್ತಿಯ ಆಶ್ರಯಪದ ಕಿವಿಗೆ ಅಹಿತವೆನಿಸುವುದಿಲ್ಲ ಎಂಬುದೇನೊ ಸರಿ. ಅಂಥ ಪದ ಕಾಲಕಾಲಕ್ಕೆ ಬದಲಾಗುತ್ತಲೂ ಇರಬಹುದು. ಬದಲಾವಣೆ ಹೊಂದುತ್ತಿರುವಂತೆಯೆ ಅಂಥ ವ್ಯಕ್ತಿ ತನ್ನ ಮೇಲೆ ಪರಿಣಾಮ ಬೀರುವ ಇನ್ನೊಂದು ಆಶ್ರಯಪದವನ್ನು ಅವಲಂಬಿಸುತ್ತಾನೆ.

ಒಮ್ಮೆ ಒಬ್ಬ ವ್ಯಕ್ತಿ ಸಿಕ್ಕಾಗ ನನ್ನ ಈ ಮೂಲಭೂತ ವಿಚಾರ ಸರಣಿ ಯಲ್ಲೇ ನನಗೆ ಅನುಮಾನ ಉಂಟಾಗತೊಡಗಿತು. ಆಶ್ರಯಪದ ಇಲ್ಲವೆ ಕ್ರಿಯೆ ಗಳನ್ನು ಅವಲಂಬಿಸದೆ ಇರುವ ಜನ ಸಹ ಇರಬಹುದೇನೊ ಎಂಬ ಸಂಶಯ ನನ್ನನ್ನು ಕಾಡತೊಡಗಿತು. ಆ ವ್ಯಕ್ತಿ ಮಾತನಾಡುವ ವಿಧಾನವನ್ನು ಸ್ವಲ್ಪ ಹತ್ತಿರದಿಂದ ಕೆಲಕಾಲ ಗಮನಿಸತೊಡಗಿದೆ. ಏಕೆಂದರೆ ಹೇಗಾದರೂ ನನ್ನ ಸಂದೇಹವನ್ನು ಪರಿಹರಿಸಿಕೊಳ್ಳಬೇಕಾಗಿತ್ತು. ಸೂಕ್ಷ್ಮವಾಗಿ ನೋಡಿದ ಮೇಲೆ ಆ ವ್ಯಕ್ತಿಯ ಆಶ್ರಯ ಏನೆಂಬುದು ಪತ್ತೆಯಾಯಿತು — ಅದೇ ಅವನ 'ಮುಗು ಳ್ನಗೆ'. ಯಾವಾಗ ಮಾತು ಸ್ವಲ್ಪ ಕೈಕೊಡುತ್ತಿತ್ತೊ, ಅವನು ಮುಗುಳ್ನಗು ತ್ತಿದ್ದ, ಮಾತಿನ ಕೊರತೆ ಮುಗುಳ್ನಗೆಯಲ್ಲಿ ಮುಚ್ಚಿಹೋಗುತ್ತಿತ್ತು.

ಒಂದು ದಿನ ನಾನು ಅವನಿಗೆ ಹೇಳಿಯೆಬಿಟ್ಟೆ—'ಮಾತು ಕೈಕೊಟ್ಟಾಗ ನೀವು ಮುಗುಳ್ನಗೆಯಲ್ಲೇ ಸರಿಪಡಿಸಿಕೊಂಡುಬಿಡ್ತೀರಿ.'

ಅವನು ಅಂದ—'ಇಲ್ಲ ಇಲ್ಲ, ಅದು ನನ್ನ ಅಭ್ಯಾಸ'.

ನಾನಂದೆ—'ಆಶ್ರಯಪದ ಅಥವಾ ಕ್ರಿಯೆಗಳನ್ನು ಬಳಸುವುದೂ ಸಹ ಒಂದು ಅಭ್ಯಾಸ ತಾನೆ'. ಅವನು ನಿರುತ್ತರನಾದ. ಏನೋ ಹೇಳಬೇಕೆಂದು ಯೋಚಿಸುತ್ತಲೆ ಮುಗುಳ್ನಕ್ಕ.

ಮನುಷ್ಯ ಸಾಧಾರಣವಾಗಿ ಒಂದಲ್ಲ ಒಂದು ಆಶ್ರಯಪದದ ತೆಕ್ಕೆಗೆ ಬೀಳುವುದು ಸಹಜವಾದುದರಿಂದ ನನ್ನಲ್ಲಿ ನಿಮ್ಮಲ್ಲಿ ಇದು ಇರುವುದು ತಪ್ಪೇನಲ್ಲ. ಆದರೆ ಇದು ನಮ್ಮ ಮಾತಿನ ಮೇಲೆ ಆವರಿಸಿ ಕಪ್ಪು ನೆರಳನ್ನು ಹರಡಿದರೆ ನಿಜಕ್ಕೂ ಧಕ್ಕೆ ಉಂಟಾಗುತ್ತದೆ. ಈ ಕಪ್ಪು ನೆರಳು ಏತಕ್ಕೆ ಉಂಟಾಗುತ್ತದೆಂದರೆ ನಾವು ನಮ್ಮನ್ನೆ ಬಿಟ್ಟು ಪ್ರಪಂಚದ ಉಳಿದೆಲ್ಲ ಕಡೆ ದೃಷ್ಟಿಹಾಯಿಸುತ್ತೇವೆ, ಟೀಕೆ ಮಾಡುತ್ತೇವೆ.

ನಮ್ಮನಮ್ಮ ಆಶ್ರಯಪದ ಇಲ್ಲವೆ ವಿಧಾನ ಇಲ್ಲವೆ ಕ್ರಿಯೆ ಏನೆಂದು ತಿಳಿದುಕೊಳ್ಳುವುದು ಕುತೂಹಲಕಾರಿ. ಅಲ್ಲದೆ ಅಷ್ಟೇ ಕಷ್ಟ ಕೂಡ. ಇಂಥ ಆಶ್ರಯ ಕಿವಿಗೆ ಅಥವಾ ಕಣ್ಣಿಗೆ ಅಡರದಂತಿದ್ದರೆ, ನಮ್ಮನ್ನು ಹೆಚ್ಚಾಗಿ ಆವರಿಸಿ ಮೇಲುಗೈ ಪಡೆಯದಿದ್ದರೆ ಅಂಥ ಪ್ರಮಾದವೇನಿಲ್ಲ. ಒಂದು ವೇಳೆ ಪರಿಸ್ಥಿತಿ ಇದಕ್ಕಿಂತ ಬೇರೆಯದಾಗಿದ್ದರೆ ಅದನ್ನು ತಡೆಗಟ್ಟುವತ್ತ ಆಲೋಚಿಸುವುದು ನಿಜಕ್ಕೂ ಉತ್ತಮ.

ಈ ರೀತಿ ತಡೆಗಟ್ಟಬೇಕಾದರೆ ಇನ್ನೊಬ್ಬ ವ್ಯಕ್ತಿಯ ಅಗತ್ಯವುಂಟಾಗುತ್ತದೆ. ಆ ವ್ಯಕ್ತಿ ನಮ್ಮನ್ನು ಆಡಿಕೊಳ್ಳುವ ಇಲ್ಲವೆ ಟೀಕೆ ಮಾಡುವ ಸ್ವಭಾವದವನಾಗಿರಬಾರದು. ನಮ್ಮ ಹಿತಾಕಾಂಕ್ಷಿಯಾಗಿರಬೇಕು. ಸಾಮಾನ್ಯವಾಗಿ ಒಂದಲ್ಲ ಒಂದು ಆಶ್ರಯಪದವನ್ನು ನಾವು ಅವಲಂಬಿಸಲೇಬೇಕು. ಒಂದನ್ನು ಬಲವಂತವಾಗಿ ತಡೆಗಟ್ಟಿದರೆ ಇನ್ನೊಂದು ಬಂದು ಅಂಟಿಕೊಳ್ಳುತ್ತದೆ. ಆದರೆ ಎರಡನೆಯದು ಮೊದಲನೆಯದಕ್ಕಿಂತ ಉತ್ತಮವಾಗಿರಬೇಕು, ಶ್ರುತಿಸಹ್ಯವಾಗಿರಬೇಕು. ಉದಾಹರಣೆಗೆ

ಒಬ್ಬ ವ್ಯಕ್ತಿಯ ಆಶ್ರಯಪದ ಹೀಗಿದೆ—'ಹಾಳಾದ್ದು'.

ಅದೇನು ಅಂಥ ಒಳ್ಳೆಯ ಆಶ್ರಯಪದವೇನಲ್ಲ. ಅದನ್ನು ಬಳಸುವವನು ಸ್ವಲ್ಪ ವಿಚಾರವಂತನಾದರೆ, ಬಾಯಿಂದ ಹೊರಬಿದ್ದ ಕೂಡಲೇ ಅದರ ಶ್ರುತಿ ಪರಿಣಾಮ ಏನಾಗುತ್ತದೆ ಎಂಬುದನ್ನು ಕಂಡುಕೊಳ್ಳಬಲ್ಲ. ಆಮೇಲೆ ತನ್ನ 'ಹಾಳಾದ್ದು' ಅಂದರೆ ಏನೆಂದು ವಿವರಿಸಲು ತೊಡಗುತ್ತಾನೆ.

ಸಾಕಷ್ಟು ಕಾಲ 'ಹಾಳಾದ್ದು ಅಂದರೆ....', 'ಹಾಳಾದ್ದು ಅಂದರೆ...'

ಅನ್ನುವ ವ್ಯಾಖ್ಯಾನವನ್ನು ಕೊಡುತ್ತಾ ಕೊಡುತ್ತಾ 'ಹಾಳಾದ್ದು' ಅನ್ನುವ ಆಶ್ರಯಂಪದದ ಜಾಗವನ್ನು 'ಅಂದರೆ' ಎಂಬ ಪದ ಆಕ್ರಮಿಸಿಕೊಳ್ಳುತ್ತದೆ. ಮೊದಲ ಪದಕ್ಕಿಂತ ಎರಡನೆಯ ಪದ ಉತ್ತಮವೆಂಬುದರಲ್ಲಿ ಯಾರಿಗೂ ಸಂಶಯ ವಿಲ್ಲವಷ್ಟೆ.

ಆಶ್ರಯಂಪದಗಳು ಅನಿವಾರ್ಯವೆಂಬುದನ್ನು ನಾವು ಎಂದಿಗೂ ಮರೆಯು ವಂತಿಲ್ಲ. ಆದರೆ ಅನಾವಶ್ಯಕವಾಗಿ ಪದೇಪದೇ ಅದರ ಪ್ರಯೋಗವಾಗುವು ದನ್ನು ತಡೆಗಟ್ಟಬಹುದು—ನಮ್ಮ ಶಬ್ದಭಂಡಾರವನ್ನು ಹೆಚ್ಚಿಸಿಕೊಳ್ಳುವು ದರ ಮೂಲಕ, ಸ್ವಲ್ಪ ಆಲೋಚಿಸಿ ಅದನ್ನು ಉತ್ತಮಪಡಿಸಿಕೊಳ್ಳಬಹುದು. ಶ್ರುತಿಸಹ್ಯವಾಗುವಂತೆ ಬದಲಾಯಿಸಿಕೊಳ್ಳಬಹುದು. ಆದರೆ ಅದನ್ನು ಪೂರ್ತಿ ಯಾಗಿ ಅಳಿಸಿಹಾಕುವುದಂತೂ ಸಾಧ್ಯವಾಗದ ಮಾತು.

೩



# ಬರವಣಿಗೆ ನಿಮ್ಮ ಸ್ವಭಾವವನ್ನು ಬಯಲಿಗೆಳೆಯಬಲ್ಲದು

ನಿಮ್ಮ ಬರವಣಿಗೆ ನಿಮ್ಮ ವ್ಯಕ್ತಿತ್ವವನ್ನು ಹೊರಗೆಡವಲ್ಲದು. ನಿಮ್ಮ ಬಗ್ಗೆ ಅದು ಚಾಡಿ ಹೇಳಬಹುದು. ನಿಮ್ಮ ಅಭ್ಯಾಸಗಳೇನು, ನಿಮ್ಮ ಶೀಲ ಸ್ವಭಾವಗಳು ಹೇಗೆ. ಯಾವುದೇ ನಿರ್ದಿಷ್ಟ ಬರವಣಿಗೆ ಕೆಲಸವನ್ನು ಮಾಡುತ್ತಿರಬೇಕಾದರೆ ನಿಮ್ಮ ಮನಸ್ಸಿನ ಸ್ಥಿತಿ ಹೇಗಿತ್ತು ಇಂಥ ವಿಚಾರಗಳನ್ನೆಲ್ಲ ಅದು ಜಾಣ ಓದುಗನಿಗೆ ತಿಳಿಯಪಡಿಸಿ ನಿಮ್ಮನ್ನು ಬಯಲುಮಾಡಬಹುದು. ಇಂಥ ಅಂಶಗಳನ್ನೆಲ್ಲ ಹೊರಗೆಡವುವುದು ನಿಮ್ಮ ಉದ್ದೇಶವಲ್ಲದಿದ್ದರೂ ನಿಮಗೆ ಗೊತ್ತಿಲ್ಲದಂತೆಯೆ ಅನೇಕ ವಿಚಾರಗಳು ಬರವಣಿಗೆಯ ಮೂಲಕ ಹೊರಬಿದ್ದಿರುತ್ತವೆ.

ಬರೆಯುವ ಸಮಯದಲ್ಲಿ ನಮ್ಮನ್ನು ನಾವು ಅಡಗಿಸಿಟ್ಟುಕೊಳ್ಳುವುದು ಕಷ್ಟಸಾಧ್ಯ. ನೀವು ಇನ್ನೊಬ್ಬರಿಗೆ ವಾಸ್ತವವಾಗಿ ಏನನ್ನು ಹೇಳಲು ಬಯಸುತ್ತೀರೊ ಅಷ್ಟನ್ನು ಮಾತ್ರ ಕಾಗದದಲ್ಲಿ ಬರೆದಿರುತ್ತೀರಿ. ಆದರೆ ಓದುವ ವ್ಯಕ್ತಿ ಸ್ವಲ್ಪ ಚಾಣಾಕ್ಷನಾಗಿದ್ದರೆ, ಅವನ ಮುಂದೆ ನೀವು ವ್ಯಕ್ತಪಡಿಸಲು ಇಷ್ಟಪಡ

ದಿರುವ ವಿಚಾರಗಳನ್ನೂ ಗ್ರಹಿಸಬಲ್ಲ. ಸ್ವಲ್ಪ ಒಳಹೊಕ್ಕು ನೋಡಿದರೆ ಸಾಕು, ಗುಟ್ಟು ಬಯಲಾಗುತ್ತದೆ.

ಇಲ್ಲಿ ಕೆಲವು ಕಾಗದಗಳ ಬರವಣಿಗೆಯ ಮಾದರಿಗಳನ್ನು ನಿಮ್ಮ ಮುಂದಿಡುತ್ತಿದ್ದೇನೆ. ಹಾಗೆಯೆ ಅವುಗಳನ್ನು ಬರೆದವರ ಮಾನಸಿಕ ಸ್ಥಿತಿಯ ವಿಶ್ಲೇಷಣೆಯನ್ನು ಸಹ ಮಾಡಲು ಪ್ರಯತ್ನಿಸಿದ್ದೇನೆ—

ಒಬ್ಬ ಮನುಷ್ಯ ಒಂದೇ ಮಾತನ್ನು ಎರಡು ಮೂರು ಬಾರಿ ಬರೆಯುತ್ತಾ ಹೋಗಿದ್ದರೆ ಅವನಲ್ಲಿ ಆತ್ಮವಿಶ್ವಾಸದ ಕೊರತೆ ಇದೆ ಎಂದರ್ಥ. ಓದುವವನಿಗೆ ಗೊತ್ತಾಗುವುದಿಲ್ಲವೆಂದು ಅವನು ತನ್ನ ಮಾತನ್ನು ಒತ್ತಿ ಸ್ಪಷ್ಟಪಡಿಸಲು ಹೇಳಿರುವುದಿಲ್ಲ. ಆದಕ್ಕೆ ಬದಲಾಗಿ ಅವನು ಓದುಗ ನನ್ನ ಬರವಣಿಗೆಯ ಕಡೆಗೆ ಹೆಚ್ಚು ಗಮನ ಹರಿಸುವುದಿಲ್ಲ. ಆದರೂ ನನ್ನ ಅಭಿಪ್ರಾಯವನ್ನು ಹೇಗೆ ಸ್ಪಷ್ಟಪಡಿಸುವುದು ಎಂಬುದಾಗಿ ಆಲೋಚಿಸುತ್ತಿರುತ್ತಾನೆ. ಈ ಅಳುಕಿನಿಂದಾಗಿಯೆ ಅವನು ಬರವಣಿಗೆಯ ಉದ್ದಕ್ಕೂ ಒಂದೇ ಮಾತನ್ನು ಪದೇ ಪದೇ ಹೇಳಿರುತ್ತಾನೆ. ಒಂದುವೇಳೆ ಕೆಲವು ಸಾಲುಗಳನ್ನು ಓದಿದರೆ ಸಾಕು. ಕಾಗದದ ಸಾರಾಂಶ ಮನವರಿಕೆಯಾಗುವಂತಿರಬೇಕು ಎಂಬುದು ಅವನ ಆಲೋಚನೆಯ ಧಾಟಿಯಾಗಿರುತ್ತದೆ.

ಈ ರೀತಿ ಬರವಣಿಗೆಯನ್ನು ಅಭ್ಯಾಸ ಮಾಡಿಕೊಂಡಿರುವ ಮನುಷ್ಯ ತನ್ನ ವ್ಯಕ್ತಿತ್ವ ಹೀನಾಯವೆಂದು ತಿಳಿದಿರುತ್ತಾನೆ. ತನ್ನ ಮಾತನ್ನು ಯಾರೂ ಗಮನಿಸಲಾರರೆಂಬುದು ಅವನ ಮನಸ್ಸಿನ ಅಳಲು. ತಾನು ಬರೆದಿರುವ ವಿಚಾರವನ್ನು ಓದುಗ ಖಂಡಿತವಾಗಿಯೂ ಮರೆತುಬಿಡುತ್ತಾನೆ ಎಂಬುದು ಅವನ ಅಂದಾಜು. ಅದಮೇಲೆ ಏನಾದರೂ ಮಾಡಿ ಎರಡು ಮೂರು ಬಾರಿಯಾದರೂ ಒತ್ತಿ ಹೇಳಿ ಓದುವವನಿಗೆ ಮನದಟ್ಟಾಗುವಂತೆ ಹೇಳಿಬಿಡಬೇಕೆಂದು ಅವನಿಗೆ ಅನಿಸುತ್ತದೆ. ಯಾವುದಾದರೂ ಒಂದು ಸಂಸ್ಥೆಗೆ ಅವನು ಆದೇಶ ನೀಡಿ ಕೆಲವು ಪದಾರ್ಥಗಳನ್ನು ಕಳಿಸಿ ಎಂಬುದಾಗಿ ಕೋರುತ್ತಾನೆ ಅಂದುಕೊಳ್ಳೋಣ, ಆದರೆ ಕಾರಣಾಂತರಗಳಿಂದ ಈ ಆದೇಶವನ್ನು ರದ್ದುಪಡಿಸಿ ಎಂದು ಕಾಗದ ಹಾಕುತ್ತಾನೆ ಎಂದು ಸಹ ಭಾವಿಸೋಣ. ಆಗ ಅವನ ಪತ್ರದ ಧಾಟಿ ಬಹುಮಟ್ಟಿಗೆ ಹೀಗಿರುತ್ತದೆ—

'ತಾವು ನನ್ನ ಆದೇಶವನ್ನು ರದ್ದುಪಡಿಸಿ. ಒಂದು ವೇಳೆ ತಾವು ಅದಕ್ಕನುಗುಣವಾಗಿ ಪದಾರ್ಥಗಳನ್ನು ಕಳಿಸಿದರೆ ನಾನು ಹಿಂದಿರುಗಿಸುತ್ತೇನೆ. ದಯವಿಟ್ಟು ಮರೆಯಬೇಡಿ. ಒಂದು ವೇಳೆ ಹಾಗೆ ಕಳಿಸಿಬಿಟ್ಟರೆ ಅದರಿಂದ ಉಂಟಾ

ಗುವ ನಷ್ಟಕ್ಕೆ ತಾವೇ ಜವಾಬ್ದಾರರಾಗುತ್ತೀರಿ. ಈ ವಿಚಾರವನ್ನು ದಯವಿಟ್ಟು ಗಮನಿಸಿ.'

ಸಾಧಾರಣ ಕಾಗದ ಪತ್ರಗಳನ್ನು ರಿಜಿಸ್ಟರ್ಡ್ ಅಂಚೆಯ ಮೂಲಕ ಕಳಿಸುವುದು, ಓದುಗನ ಗಮನವನ್ನು ನಿರ್ದಿಷ್ಟವಾದ ವಿಷಯದ ಕಡೆಗೆ ವಿಶೇಷವಾಗಿ ಸೆಳೆಯಲು ಕಾಗದದ ಅನೇಕ ಕಡೆಗಳಲ್ಲಿ ಗೆರೆಗಳನ್ನು ಎಳೆಯುವುದು ಇವೆಲ್ಲ ಇಂಥ ವ್ಯಕ್ತಿಯ ಸ್ವಭಾವವಾಗಿರುತ್ತದೆ. ಕಾಗದದ ಮೇಲೆ ಸಹ ಅದನ್ನು ಪಡೆಯುವವರ ಹಾಗೂ ತನ್ನ ವಿಳಾಸಗಳನ್ನು ವಿವರಸಹಿತವಾಗಿ ಸ್ಪಷ್ಟವಾಗಿ ಬರೆದಿರುತ್ತಾನೆ. ವಿಳಾಸ ಸ್ಪಷ್ಟವಾಗಿಲ್ಲದ ಕಾರಣದಿಂದಾಗಿ ಕಾಗದ ತಲುಪದಿದ್ದರೆ ಹೇಗೆ, ತಾನೇ ಅದನ್ನು ಖುದ್ದಾಗಿ ವಿಳಾಸದಾರನಿಗೆ ತಲುಪಿಸಲು ಸಾಧ್ಯವಾಗುತ್ತಿಲ್ಲವಲ್ಲ ಎಂಬ ಆತಂಕ ಅವನಲ್ಲಿ ಮನೆಮಾಡಿರುತ್ತದೆ.

ಆತ್ಮವಿಶ್ವಾಸವುಳ್ಳ ಮನುಷ್ಯನ ಕಾಗದ ನಿಜಕ್ಕೂ ತುಂಬ ಸಂಕ್ಷೇಪವಾಗಿರುತ್ತದೆ. ಆತ್ಮವಿಶ್ವಾಸ ಒಂದು ವೇಳೆ ಅಹಂನ ಎಲ್ಲೆಯನ್ನು ಹೆಚ್ಚು ತಲುಪಿದ್ದರೆ ಅಂಥ ವ್ಯಕ್ತಿ ಒಮ್ಮೊಮ್ಮೆ ತನ್ನ ವಿಳಾಸವನ್ನು ಬರೆಯಲು ಸಹ ಮರೆತುಬಿಡುತ್ತಾನೆ. ಈ ಅಹಂಭಾವನೆಗೆ ಕಾರಣವೇನೆಂದರೆ ಆ ವ್ಯಕ್ತಿಯ ಮನಸ್ಸಿನಲ್ಲಿ ಅವನ ಅಸ್ತಿತ್ವ ಯಾರೇ ಆಗಲಿ ಮರೆಯುವಂತಹದಲ್ಲ ಎಂಬ ದೃಢಭಾವನೆ ಮನೆಮಾಡಿರುತ್ತದೆ. ತಾನು ಎಲ್ಲರಿಗೂ ಗೊತ್ತೆಂಬುದು ಅವನ ದೃಢ ನಿಲುವು. ಈ ಹಮ್ಮಿನಲ್ಲೇ ಕೆಲವೊಮ್ಮೆ ವಿಳಾಸ ಬರೆಯಬೇಕಾದರೆ ಅಗತ್ಯಕ್ಕಿಂತ ಹೆಚ್ಚಾಗಿ ಸಂಕ್ಷೇಪಗೊಳಿಸಿಬಿಟ್ಟಿರುತ್ತಾನೆ. ಕಷ್ಟ ಏನಿದ್ದರೂ ಅಂಚೆಪೇದೆಯ ತಲೆಗೆ ಕಟ್ಟಿದ್ದು ತಾನೆ!

ತಾನು ಬರೆದ ವಿಚಾರವನ್ನು ಮತ್ತೆ ಮತ್ತೆ ಹೊಡೆದುಹಾಕಿ ಬರೆಯುವ ವ್ಯಕ್ತಿ ಈ ನಿಟ್ಟಿನಲ್ಲಿ ಇನ್ನೊಂದು ಉದಾಹರಣೆಯಾಗುತ್ತಾನೆ. ತಾನು ಆ ಮೊದಲಿಗೆ ಮಾಡಿದ ತೀರ್ಮಾನ ತಪ್ಪೆಂದು ತತ್‌ಕ್ಷಣವೇ ಇಂಥ ವ್ಯಕ್ತಿ ಭಾವಿಸತೊಡಗುತ್ತಾನೆ. ಬದುಕಿನ ಯಾವುದೇ ನೆಲೆಯಲ್ಲಿ ಇಂಥ ಮನುಷ್ಯ ಆತ್ಮವಿಶ್ವಾಸದಿಂದ ತಂತರ್ಣ ತೀರ್ಮಾನಗಳನ್ನು ಕೈಗೊಳ್ಳಲಾರ. ಇದು ಎಲ್ಲಿಯವರೆಗೆ ಹೋಗಿರುತ್ತದೆಂದರೆ ಹೋಟೆಲಿನಲ್ಲಿ ಮಾಣಿಗೆ ತಿಂಡಿತರಲು ಆರ್ಡರ್ ಕೊಟ್ಟ ಮೇಲೂ ಕೂಡಲೇ ಅವನನ್ನು ಹಿಂದಕ್ಕೆ ಕರೆದು ಬೇರೆ ತಿಂಡಿ ತರುವ ಹಾಗೆ ಹೇಳುವುದು ಉತ್ತಮವೇನೊ ಅಂತ ಈತ ತೊಳಲಾಡುತ್ತಿರುತ್ತಾನೆ. ಹಾಗೆಯೆ ಇಂಥ ಮನುಷ್ಯ ಎಷ್ಟೇ ದೊಡ್ಡ ವಿದ್ವಾಂಸನಾದರೂ ಸಕಾಲದಲ್ಲಿ ಉಚಿತವಾದ ಪದಗಳನ್ನು ಆರಿಸಬೇಕಾದರೆ ಗಲಿಬಿಲಿಗೊಳ್ಳುವ ಕಾರಣ ಒಳ್ಳೆಯ ಮಾತುಗಾರ ಅಥವಾ ವಾಕ್ಪಟು ಎನಿಸಿಕೊಳ್ಳಲಾರ.

ತನ್ನದೇ ಬರವಣಿಗೆಯನ್ನು ಹೊಡೆದು ಬರೆಯುವ ಇಂಥ ವ್ಯಕ್ತಿಯ ನಡೆವಳಿಕೆ ಇನ್ನೊಂದು ಅಂಶವನ್ನೂ ಸಹ ಬಟ್ಟಬಯಲು ಮಾಡಿ ತೋರಿಸುತ್ತದೆ. ಅದು ಏನೆಂದರೆ ಬದುಕಿನ ಅನೇಕ ಕ್ಷೇತ್ರಗಳಲ್ಲಿ ಈತ ತಾನು ಮಾಡಿರುವೆನೆಂದುಕೊಂಡಿರುವ ತಪ್ಪುಗಳನ್ನು ಒಪ್ಪಿಕೊಳ್ಳುತ್ತಾ ಹೋಗುತ್ತಾನೆ ಮತ್ತು ಆ ವಿಚಾರವಾಗಿ ತನ್ನನ್ನು ತಾನು ಹೇಗೆ ಉತ್ತಮಪಡಿಸಿಕೊಳ್ಳಬಹುದೆನ್ನುವ ಮಾನಸಿಕ ತಾಕಲಾಟದಲ್ಲಿರುತ್ತಾನೆ.

ಒಮ್ಮೆ ವೇಳೆ ತನ್ನ ಬರವಣಿಗೆಯಲ್ಲಿ ಆಗಿರುವ ತಪ್ಪನ್ನು ಕಣ್ಣಿಗೆ ರಾಚುವ ಹಾಗೆ ಹೊಡೆದುಹಾಕದೆ, ಕಲಾತ್ಮಕ ರೀತಿಯಲ್ಲಿ ಕಣ್ಣಿಗೆ ಚುಚ್ಚದ ರೀತಿಯಲ್ಲಿ ತಿದ್ದುಪಡಿ ಮಾಡುವಂತಹ ಮನುಷ್ಯನ ಕಲಾಪ್ರಿಯತೆ ಬರವಣಿಗೆಯಲ್ಲಿ ಮಾತ್ರವಲ್ಲ, ಉಳಿದ ಕ್ಷೇತ್ರಗಳಲ್ಲೂ ಎದ್ದು ಕಾಣುತ್ತದೆ.

ಇನ್ನೊಂದು ಬಗೆಯ ಜನ ತಾವು ತಪ್ಪು ಬರೆದರೂ ಬರವಣಿಗೆಯ 'ಸೊಗಸು' ಹಾಳಾಗುತ್ತದೆಂಬ ಭಯದಿಂದ ಅವನ್ನು ತಿದ್ದದೆ ಹಾಗೆಯೆ ಉಳಿಸಿಕೊಳ್ಳುವುದುಂಟು. ಇಂಥ ಜನ ತುಂಬ ಹಟದ ಸ್ವಭಾವದವರು. ಇವರು ಬದುಕಿನ ಇತರ ರಂಗಗಳಲ್ಲಿ ಸಹ ತಾವು ಮಾಡಿದ ತಪ್ಪನ್ನು ಒಪ್ಪದೇ ಸಾಧಿಸುವ ಪ್ರವೃತ್ತಿಯುಳ್ಳವರಾಗಿರುವ ಸಂಭವ ಹೆಚ್ಚು.

ಸಣ್ಣ ಕಾಗದದ ತುಂಡಿನ ಮೇಲೆ ಒತ್ತೊತ್ತಾಗಿ ಬರೆಯುವ ಜನ ಜಿಪುಣತನವನ್ನು ಮೈಗೂಡಿಸಿಕೊಂಡಿರುತ್ತಾರೆ. ತಮ್ಮ ಜಿಪುಣತನವನ್ನು ಬೇರೆಯವರ ಎದುರಿಗೆ ಪ್ರದರ್ಶಿಸಲು ಅವರಿಗೆ ಯಾವ ಬಗೆಯ ಸಂಕೋಚವೂ ಆಗುವುದಿಲ್ಲ.

ಮೂಲತಃ ಸ್ವಭಾವದಲ್ಲಿ ಜಿಪುಣರಾಗಿದ್ದರೂ ತಮ್ಮನ್ನು ಉದಾರಿಗಳೆಂದು ಜನ ತಿಳಿಯಲಿ ಎಂದು ತೋರ್ಪಡಿಸುವ ಮಂದಿ ಸಣ್ಣ ಕಾಗದದ ಬದಲು ದೊಡ್ಡ —ಸಾಕಷ್ಟು ದೊಡ್ಡದಾದ—ಕಾಗದ ತೆಗೆದುಕೊಳ್ಳುತ್ತಾರೆ. ಆದರೆ ಕಾಗದ ದೊಡ್ಡದಿದ್ದರೂ ಪಕ್ಕದಲ್ಲಿ ಜಾಗಬಿಡದೆ ಸಹ ಒತ್ತೊತ್ತಾಗಿ ಬರೆಯುತ್ತಾ ಹೋಗುತ್ತಾರೆ. ಬರವಣಿಗೆ ಮುಗಿದ ಮೇಲೆ ಕಾಗದದ ಬಹಳಷ್ಟು ಭಾಗ ಖಾಲಿಯಾಗಿಯೇ ಉಳಿದುಬಿಟ್ಟಿರುತ್ತದೆ.

ಜಿಪುಣ ವ್ಯಕ್ತಿಗಳ ಮುಖ ಅವರ ಬರವಣಿಗೆಯಲ್ಲಿ ಇನ್ನೊಂದು ಬಗೆಯಲ್ಲಿ ವ್ಯಕ್ತವಾಗುವುದುಂಟು. ಅವನು ಸಾಕಷ್ಟು ಓದು ಬರೆದವನಾಗಿದ್ದು ನಾಲ್ಕು ಕಡೆ ಮಾರ್ಜಿನ್ ಬಿಟ್ಟು ಬರೆಯಲು ತಿಳಿದುಕೊಂಡಿರುವವನಾಗಿರಬಹುದು. ಆದರೆ ಅವನ ಜಿಪುಣತನ ಇನ್ನೊಂದು ಬಗೆಯಲ್ಲಿ ಹೊರಬೀಳುತ್ತದೆ. ಪ್ರತಿಯೊಂದು ಸಾಲಿನ ಕೊನೆಯವರೆಗೆ ಬರುವ ಹೊತ್ತಿಗೆ ಅವನ ಮನಸ್ಸಿನಲ್ಲಿ ಇನ್ನೂ ಒಂದೆ

ರಡು ಶಬ್ದಗಳನ್ನು ಸೇರಿಸಿದರೆ ಹೇಗೆ ಎಂಬ ಆಸೆ ಅಂಕುರವೊಡೆಯುತ್ತದೆ. ಇದರ ಪರಿಣಾಮವಾಗಿ ಅಂಥ ವ್ಯಕ್ತಿಯ ಬರವಣಿಗೆಯಲ್ಲಿ ಸಾಲಿನ ಕೊನೆಯ ಭಾಗ ಮೊದಲ ಭಾಗಕ್ಕಿಂತಲೂ ಹೆಚ್ಚು ಒತ್ತೊತ್ತಾಗಿರುತ್ತದೆ.

ತುಂಬ ದೊಡ್ಡ ಕಾಗದ ತೆಗೆದುಕೊಂಡು ಅದರ ಒಂದು ಸಣ್ಣ ಭಾಗದಲ್ಲಿ ಚಿಕ್ಕದಾಗಿ—ಆದರೆ ಸುಂದರವಾಗಿ ಕಾಣುವಂತೆ—ಬರೆಯುವ ವ್ಯಕ್ತಿ ಕಡಮೆ ವೆಚ್ಚದಲ್ಲಿ ತನ್ನ ಜೀವನವನ್ನು ಸಾಗಿಸುವ ಸ್ವಭಾವದವನಾಗಿರುತ್ತಾನೆ. ಇದರೊಟ್ಟಿಗೆ ತಾನು ದುಂದುಗಾರನೆಂಬ ಸೋಗುಹಾಕುವ ಪ್ರವೃತ್ತಿಯೂ ಇಂಥ ವ್ಯಕ್ತಿಯಲ್ಲಿರುವುದನ್ನು ಈ ಬರವಣಿಗೆ ಹೊರಗೆಡವುತ್ತದೆ.

ಮೊದಲಿಗೆ ವಿರಳವಾಗಿ ಬರೆಯುತ್ತಾ ಹೋಗಿ ಕಡೆಕಡೆಗೆ ಬರುತ್ತಿದ್ದ ಹಾಗೆಯೆ ಮಾರ್ಜಿನ್ನಿಗೆ ಸಹ ಸ್ಥಳ ಕೊಡದಂತೆ ಒತ್ತಾಗಿ ಬರೆಯುತ್ತಾ ಹೋಗುವ ಮನುಷ್ಯನ ಎರಡು ಸ್ವಭಾವಗಳನ್ನು ಅವನ ಬರವಣಿಗೆ ಬಯಲು ಮಾಡುತ್ತದೆ—

(i) ಒಂದು ವೇಳೆ ಕಾಗದ ಆವಶ್ಯಕವೆನಿಸುವ ಮಾತುಗಳಿಂದ ತುಂಬಿದ್ದರೆ, ಅದನ್ನು ಬರೆದವನು ಸರಿಯಾಗಿ ಯೋಜಿಸಿ ಲೆಕ್ಕಾಚಾರ ಹಾಕಿಕೊಂಡು ಯಾವುದೇ ಕೆಲಸ ಮಾಡಲಾರ ಎಂಬ ಅಂಶ ಸ್ಪಷ್ಟವಾಗುತ್ತದೆ. ಇಂಥ ವ್ಯಕ್ತಿ ತನ್ನ ಸಂಬಳವನ್ನು ತಿಂಗಳ ಪೂರ್ತಿ ಹೇಗೆ ಖರ್ಚು ಮಾಡಬೇಕೆಂಬ ವಿಚಾರದಲ್ಲಿ ಬಜೆಟ್ ಮಾಡಿದರೆ ಖಂಡಿತ ವಿಫಲನಾಗುವನು. ಮೊದಲ ವಾರದಲ್ಲಿ ಹಿಡಿತವಿಲ್ಲದೆ ಜಾಸ್ತಿ ಖರ್ಚುಮಾಡುತ್ತಾನೆ ಹಾಗೂ ಉಳಿದ ಮೂರು ವಾರ ಹಾಗೂ ಹೀಗೂ ದಿನಗಳನ್ನು ಎಣಿಸುತ್ತಾ ಕಾಲ ದೂಡುತ್ತಾನೆ. ಅವನ ಅಂದಾಜೆಲ್ಲ ಬಹುಮಟ್ಟಿಗೆ ತಪ್ಪಾಗುವಂಥವೇ.

(ii) ಇಂಥ ಕಾಗದ ಒಂದು ವೇಳೆ ಅನಾವಶ್ಯಕವಾದ ಮಾತುಗಳಿಂದ ಕೂಡಿದ್ದರೆ ಅದನ್ನು ಬರೆದವನು ವೇಳೆಯನ್ನು ಹಾಳುಮಾಡುವ ಸ್ವಭಾವದವನಾಗಿರುತ್ತಾನೆ. ವ್ಯವಸ್ಥಿತವಾಗಿ ಕೆಲಸ ಮಾಡುವುದು ಅವನ ಸ್ವಭಾವಕ್ಕೆ ವಿರುದ್ಧ. ಅಷ್ಟೇ ಅಲ್ಲ, ಅವನು ವಾಚಾಳಿಯೂ ಆಗಿರುತ್ತಾನೆ.

'ಆಮೇಲೆ,' 'ಮತ್ತೆ' ಈ ಬಗೆಯ ಶಬ್ದಗಳನ್ನು ಪದೇ ಪದೇ ಬಳಸುವ ವ್ಯಕ್ತಿ ಸರಿಯಾಗಿ ಯೋಜಿಸಿ ವ್ಯವಸ್ಥಿತವಾಗಿ ಯಾವ ಕೆಲಸವನ್ನೂ ಮಾಡಲಾರ. ಕಾಗದದಲ್ಲಿ ಏನು ಬರೆಯಬೇಕೆಂದು ಮೊದಲೇ ಆಮೂಲಾಗ್ರವಾಗಿ ಯೋಚಿಸಿರುವುದಿಲ್ಲವೊ ಹಾಗೆಯೆ ಯಾವುದೇ ಕೆಲಸಕ್ಕೆ ತೊಡಗುವ ಮುನ್ನ ಅವನು ಅದರ ಸಾಧಕಬಾಧಕಗಳನ್ನು ಕುರಿತು ಪೂರ್ವಭಾವಿಯಾಗಿಯೆ ಯೋಚಿಸಿರುವುದಿಲ್ಲ. ('ಆಮೇಲೆ', 'ಮತ್ತೆ' ಇಂಥ ಪದಗಳನ್ನು ಅಗತ್ಯಕ್ಕನಂಗುಣವಾಗಿ ಬರೆ

ಯುವವರ ಬಗ್ಗೆ ಇಲ್ಲಿ ಈ ಮಾತನ್ನು ಹೇಳುತ್ತಿಲ್ಲ. ಇಂಥ ಪದಗಳು ಎಲ್ಲಿ ಅಗತ್ಯವಾಗಿ ಹಾಗೂ ಎಲ್ಲಿ ಅನಾವಶ್ಯಕವಾಗಿ ಪ್ರಯೋಗಗೊಂಡಿವೆ ಎಂಬುದನ್ನು ತಿಳಿದ ಓದುಗರು ಪತ್ತೆಹಚ್ಚಬಲ್ಲರು !)

ಕಾಗದವನ್ನು ಸುಂದರವಾಗಿ ತುಂಬಾ ಮುತುವರ್ಜಿಯಿಂದ ಪ್ರಾರಂಭಿಸಿ ಕಡೆಯಲ್ಲಿ ಅಡ್ಡಾದಿಡ್ಡಿಯಾಗಿ ಮುಗಿಸುವ ವ್ಯಕ್ತಿ ಯಾವುದೇ ಕೆಲಸವನ್ನು ಅಟ್ಟಹಾಸದಿಂದ ಪ್ರಾರಂಭಿಸುತ್ತಾನೆ. ಆದರೆ ಸ್ವಲ್ಪ ಕಾಲ ಕಳೆದ ಮೇಲೆ ಏಕೋ ಏನೋ ಕಕ್ಕಾಬಿಕ್ಕಿಯಾಗಿಬಿಡುತ್ತಾನೆ. ಅಂಥವರು ಮನೆ ಕಟ್ಟಿಸಿದರೆ ಕೆಳಗಿನ ಅಂತಸ್ತು ಸೊಗಸಾಗಿರುತ್ತದೆ. ಮೇಲಿನ ಅಂತಸ್ತಿಗೆ ಹೆಚ್ಚು ಗಮನ ಹರಿಸಿರಲಾಗಿರುವುದಿಲ್ಲ. ಮೇಲಮೇಲಕ್ಕೆ ಹೋದಂತೆ ಕಟ್ಟಡದ ಸೊಗಸು ಕಡಮೆಯಾಗುತ್ತಾ ಹೋಗಿರುತ್ತದೆ.

ಲಕೋಟೆಯಲ್ಲಿ ಬರೆಯುವಷ್ಟು ಸಮಾಚಾರವನ್ನು ಸುಂದರವಾಗಿ ಅಂಚೆ ಕಾರ್ಡಿನಲ್ಲೇ ಬರೆದು ಮುಗಿಸುವ ವ್ಯಕ್ತಿಗಳು ಸ್ವಭಾವತಃ ಮಿತವ್ಯಯಿಗಳೆಂದೆನಿಸಿಕೊಳ್ಳುತ್ತಾರೆ.

ಉಗ್ರಸ್ವಭಾವದ ಮಂದಿ ತಮ್ಮ ಬರವಣಿಗೆಯಲ್ಲೂ ಉಗ್ರತೆಯನ್ನು ತೋರಿಸದೆ ಸುಮ್ಮನಿರುವುದಿಲ್ಲ. ಇಂಥವರು ಲೇಖನಿಯನ್ನು ಒತ್ತಿ ಬರೆಯುತ್ತಾರೆ. ಆದರಿಂದ ಗೆರೆಗಳೂ ದಪ್ಪಗೆ ಇರುತ್ತವೆ. ಕಡಮೆ ಒತ್ತಿ ಬರೆಯುವ ಮಂದಿ ಸಾಮಾನ್ಯವಾಗಿ ಶಾಂತ ಸ್ವಭಾವದವರು. ಒಂದು ವೇಳೆ ಶಾಂತ ಸ್ವಭಾವದ ವ್ಯಕ್ತಿ ಸಹ ಕೋಪದ ವೇಳೆಯಲ್ಲಿ ಬರೆದರೆ ಅವನ ಬರವಣಿಗೆ ಕೂಡ ಆ ಸಮಯದಲ್ಲಿ ದಪ್ಪಗೆ ಮತ್ತು ಆಳವಾಗಿ ಇರುತ್ತದೆ.

ಕಾಗದದಲ್ಲಿ ಬಾಯಿಗೆ ಬಂದದ್ದನ್ನು ಹಾಗೂ ಬೈಯ್ಗಳನ್ನು ಬರೆಯುವ ವ್ಯಕ್ತಿ ಚಂಚಲಸ್ವಭಾವದವನು. ಅವನು ಉನ್ಮತ್ತತೆಯಿಂದ ಕೂಡಿದವನಾಗಿರುತ್ತಾನೆ. ಅವನು ಎಷ್ಟು ಹತಾಶನಾಗಿರುತ್ತಾನೆಂದರೆ ಎದುರಿಗೆ ನಿಂತು ಬಾಯಲ್ಲಿ ಮಾತಾಡಲಾರ. ಅವನ ಪ್ರತಾಪವೆಲ್ಲ ಲೇಖನಿಯ ಮೂಲಕವೇ. ಎದುರಿಗೆ ಸಿಕ್ಕಾಗ ಕೂಡಲೇ ಕ್ಷಮೆ ಕೇಳಿಬಿಡುತ್ತಾನೆ.

ಅಕ್ಷರಗಳನ್ನು ಅಗತ್ಯಕ್ಕಿಂತ ಹೆಚ್ಚು ಸ್ಪಷ್ಟವಾಗಿ ಬರೆಯದೆ ಹೋಗುವ ವ್ಯಕ್ತಿ ಯಾವ ಅನಾವಶ್ಯಕವಾದ ಕೆಲಸವನ್ನು ಮಾಡಲೂ ಸಿದ್ಧನಾಗಿರುವುದಿಲ್ಲ. ಕೆಲಸ ನಡೆದುಕೊಂಡು ಹೋಗಲು ತೀರ ಎಷ್ಟು ಅಗತ್ಯವೋ ಅಷ್ಟನ್ನು ಮಾತ್ರ ಅವನು ಮಾಡುತ್ತಾನೆ.

ಇದಕ್ಕೆ ತೀರ ವ್ಯತಿರಿಕ್ತವಾಗಿ, ಬರವಣಿಗೆಯಲ್ಲಿ ಅಕ್ಷರಗಳನ್ನು ಅಗತ್ಯಕ್ಕಿಂತ

ಹೆಚ್ಚು ಸ್ಪಷ್ಟವಾಗಿ, ಅಲಂಕಾರಯುತವಾಗಿ ಬರೆಯುವ ವ್ಯಕ್ತಿಗಳು ಯಾವುದೇ ಕೆಲಸ ಮಾಡಬೇಕಾದರೆ ಅಗತ್ಯಕ್ಕಿಂತ ಹೆಚ್ಚು ಸಮಯವನ್ನು ಹಾಳುಮಾಡುವ ಸ್ವಭಾವದವರಾಗಿರುತ್ತಾರೆ.

ಬರವಣಿಗೆಯ ಸಣ್ಣಪುಟ್ಟ ಬಾಗುಬಳುಕುಗಳನ್ನು ಗಮನಿಸದೆ ಕೇವಲ ಅರ್ಥವಾಗುವಷ್ಟರ ಮಟ್ಟಿಗೆ ಬರೆದುಕೊಂಡು ಹೋಗುವ ಮಂದಿ ಬದುಕಿನಲ್ಲಿ ಮಹತ್ವಪೂರ್ಣವೆನಿಸುವ ವಿಷಯಗಳಿಗೆ ಮಾತ್ರ ಗಮನ ಕೊಡುತ್ತಾರೆ. ಸಣ್ಣ ಪುಟ್ಟ ವಿಚಾರಗಳ ಬಗೆಗೆ ಆಲೋಚಿಸುತ್ತಾ ಕೂರುವುದು ಅವರ ಸ್ವಭಾವಕ್ಕೆ ವಿರುದ್ಧ. ಕೆಲವು ವ್ಯಕ್ತಿಗಳ ಬರವಣಿಗೆಯಲ್ಲಿ ಪದಗಳು ಕೈಬಿಟ್ಟು ಹೋಗುತ್ತವೆ. ಅಂಥವರ ಚಿಂತನಶಕ್ತಿಗೂ ಕೈಯಿಗೂ ಹೊಂದಾಣಿಕೆ ಇರುವುದಿಲ್ಲ. ಚಿಂತನೆಯ ಓಟದೊಂದಿಗೆ ಕೈಯೂ ಓಡಬೇಕಾಗುವುದರಿಂದ ಪದಗಳನ್ನು ನುಂಗಿಬಿಡುತ್ತಾರೆ. (ಇಲ್ಲಿ ನಮ್ಮ ಉದ್ದೇಶ ತುಂಬಾ ವೇಗವಾಗಿ ಬರೆಯುವವರನ್ನು ಕುರಿತಿದೆಯೆ ಹೊರತು, ಕಡಮೆ ವಿದ್ಯಾಭ್ಯಾಸ ಪಡೆದವರನ್ನು ಕುರಿತಂತಿಲ್ಲ.)

ಪದಗಳನ್ನು ಒಂದು ಸಾಲಿನಲ್ಲಿ ನೇರವಾಗಿ ಬರೆಯದೆ, ಸಾಲು ಮೇಲೆ ಕೆಳಗೆ ಹೋಗುವಂತೆ ಬರೆಯುವ ವ್ಯಕ್ತಿ ಬರೆಯುವ ವೇಳೆಯಲ್ಲಿ ಬೇಜಾರುಗೊಂಡಿರುತ್ತಾನೆ. ಈ ಬೇಜಾರಿಗೆ ಕಣ್ಣಿನ ದೋಷ ಅಥವಾ ಆಗಿನ ಮನಃಸ್ಥಿತಿ ಸರಿಯಾಗಿಲ್ಲದಿರುವುದು ಕಾರಣವಾಗಿರಬಹುದು.

ಒಂದೇ ಜಾಗದಲ್ಲಿ ಬೇರೆಬೇರೆ ಭಾಷೆಯ ಅಂಕಿಗಳನ್ನು ಬರೆಯುವುದು (ಉದಾ : ೭೩5) ಅಥವಾ ಒಂದೇ ಸಂದರ್ಭದಲ್ಲಿ ಉದ್ದೇಶವಿಲ್ಲದೆ ಅಂಕಿ ಅಕ್ಷರ ಎರಡರಲ್ಲೂ ಬರೆಯುವುದು (ಉದಾ : 5 ರೂಪಾಯಿಗಳಿಗೆ ಏಳು ಗೋಣಿ ಚೀಲಗಳು) ಬರೆಯುವವನಲ್ಲಿ ಏಕಾಗ್ರ ಶಕ್ತಿ ಕಡಮೆಯಿದೆ ಎಂಬ ಅಂಶವನ್ನು ಹೊರಗೆಡವುತ್ತದೆ.

ಬರೆಯುವಾಗ ಆಮೇಲಿನ ಶಬ್ದವನ್ನು ಮೊದಲೇ ಬರೆದುಬಿಡುವುದು, ಅನಂತರ ಹೊಡೆದುಹಾಕುವುದು, ಆಮೇಲೆ ಮತ್ತೆ ಸರಿಯಾಗಿ ಬರೆಯುವುದು ಇಂಥ ವಿಚಾರಗಳು ಬರೆಯುವವನ ಮನಸ್ಸು ಸ್ಥಿಮಿತದಲ್ಲಿಲ್ಲ ಎಂಬುದನ್ನು ತೋರ್ಪಡಿಸುತ್ತವೆ.

ನೇರವಾದ ಸಾಲುಗಳು, ಸುಂದರವಾದ ಹೆಚ್ಚು ಸಣ್ಣಗಿರದ ಹೆಚ್ಚು ದಪ್ಪವಾಗಿರದ ಸ್ಪಷ್ಟ ಅಕ್ಷರಗಳು, ಸರಿಯಾದ ಕಾಗದದ ಮೇಲೆ ಸರಿಯಾದಷ್ಟು ಮಾರ್ಜಿನ್, ಸಂಕ್ಷಿಪ್ತವಾಗಿದ್ದರೂ ಸಂಪೂರ್ಣವಾಗಿ ಅರ್ಥವಾಗುವಂತಹ ಬರವಣಿಗೆ—ಇವುಗಳನ್ನು ಹೊಂದಿರುವ ವ್ಯಕ್ತಿ ಮಾನಸಿಕ ಹಾಗೂ ಶಾರೀರಕ ದೃಷ್ಟಿ

ಯಿಂದ ಆರೋಗ್ಯವಂತನಾಗಿರುತ್ತಾನೆ ಅಂದುಕೊಳ್ಳಬಹುದು.

ಸದ್ಯಕ್ಕೆ ಇಷ್ಟು ಹೇಳುವುದು ಸಾಧ್ಯವಾಗಿದೆ. ಆದರೆ ಇಷ್ಟುಮಾತ್ರ ಸಾಲದು. ಇದಕ್ಕಿಂತಲೂ ಹೆಚ್ಚು ವಿಶ್ಲೇಷಣೆ ಸಾಧ್ಯ. ಪ್ರಯತ್ನ ನಡೆಯುತ್ತಿದೆ. ಬಹುಶಃ ಒಂದು ದಿನ ಜನ ಜಾತಕವನ್ನು ಹಿಡಿದುಕೊಂಡು ಹೋಗಿ ಜ್ಯೋತಿಷಿಯನ್ನು ಸಂಪರ್ಕಿಸುವ ಬದಲು ಬರವಣಿಗೆಯನ್ನು ತೆಗೆದುಕೊಂಡು ಬರಹ ವಿಶೇಷಜ್ಞರ ಹತ್ತಿರ ಹೋಗಿ ಹಿಂದಿನ ಹಾಗೂ ಮುಂದಿನ ಭಾಗ್ಯದ ದಿನಗಳ ಬಗೆಗೆ ತಿಳಿಯಲು ಪ್ರಯತ್ನಿಸಬಹುದೇನೊ !



೪

# ಕಡಿಮೆ 'ಬಿಜಿ'ಯಾಗಿದ್ದು ಹೆಚ್ಚು ಕೆಲಸಮಾಡಿ

ಅವನು ತಲೆ ಬಗ್ಗಿಸಿ ಒಂದೇ ಸಮನೆ ಹುಡುಕಾಡುತ್ತಿದ್ದ. ವಿಪರೀತ ಗಡಿಬಿಡಿಯಲ್ಲಿದ್ದ.

ಸುಮಾರು ಎರಡು ಡಜನ್ ರಬ್ಬರ್ ಸ್ಟಾಂಪುಗಳು ಅವನ ಮುಂದೆ ಹರಡಿದ್ದವು. ಅವನಿಗೆ ಬೇಕಾಗಿದ್ದ ರಬ್ಬರ್ ಸ್ಟಾಂಪ್ ಮಾತ್ರ ಕೈಗೆ ಸಿಗುತ್ತಿರಲಿಲ್ಲ. ಮತ್ತೆ ಮತ್ತೆ ಅವುಗಳಲ್ಲೇ ತಡಕಾಡಿ ನೋಡುತ್ತಿದ್ದ, ಕೈಗೆ ಸಿಗದೆ ಪೇಚಾಡುತ್ತಿದ್ದ. ತುಂಬ ಕಷ್ಟಪಟ್ಟ ಮೇಲೆ ಬೇಕಾದ ಮೊಹರು ಸಿಕ್ಕಿತು. ಅದನ್ನು ಕಾಗದದ ಮೇಲೆ ಒತ್ತಿ ಪುನಃ ರಾಶಿಗೆ ಸೇರಿಸಿದ. ಒಂದು ಕ್ಷಣ ಅವನಿಗೆ ಉಸಿರಾಡಲು ಸಾಧ್ಯವಾದಂತಾಗಿ ಮನಸ್ಸು ಹಗುರವಾಯಿತು.

ಅವನು ಒಂದು ದೊಡ್ಡ ಜನರಲ್ ಸ್ಟೋರ್ಸ್ ಮಾಲೀಕ. ನಾನು ಆ ಅಂಗಡಿಗೆ ಕಾಲುಚೀಲ ಕೊಳ್ಳಲು ಹೋಗಿದ್ದೆ. ಅಲ್ಲಿಯ ಕೆಲಸಗಾರ ನನಗಾಗಿ

ಕಾಲುಂಚೀಲದ ಡಬ್ಬವನ್ನು ಹುಡುಕುತ್ತಿದ್ದ. ಆದರೆ ಅದು ಸಿಗುತ್ತಿರಲಿಲ್ಲ. ಆಗ ಆ ಕೆಲಸಗಾರನ ಮುಖದ ಮೇಲೆ ಕೂಡ ಮಾಲೀಕ ರಬ್ಬರ್ ಸ್ಟಾಂಪ್ ಹುಡುಕಲು ಪರದಾಡುತ್ತಿದ್ದಾಗ ಇದ್ದ ಮುಖಭಾವವೇ ಪುನೆಮಾಡಿತ್ತು.

ಅದು ತುಂಬ 'ಬಿಜಿ'ಯಾದ ಅಂಗಡಿ. ಅಲ್ಲಿ ಯಾವಾಗಲೂ ಗಿರಾಕಿಗಳ ಸಂತೆಯೆ ನೆರೆದಿರುತ್ತಿತ್ತು. ಅದರಿಂದಾಗಿ ಮಾಲೀಕನ ತಲೆ ಯಾವಾಗಲೂ ಬಿಸಿಯಾಗಿರುತ್ತಿತ್ತು. ಬೆಳಗ್ಗೆ ಅಂಗಡಿ ಬಾಗಿಲು ತೆರೆದಾಗಿನಿಂದಲೂ ಸಾಯಂಕಾಲ ಮುಚ್ಚುವವರೆಗೂ ಒಂದು ನಿಮಿಷ ಪುರುಸೊತ್ತು ಸಿಗುವುದಿಲ್ಲವೆಂಬುದೇ ಅವನ ಅಳಲು. ತನ್ನ ಸ್ವಂತ ಕೆಲಸಗಳನ್ನು ನೋಡಿಕೊಳ್ಳಲೂ ವ್ಯವಧಾನವಿಲ್ಲ. ತೀರ 'ಬಿಜಿ' ಯಾಗಿದ್ದುದರಿಂದಾಗಿ ಅವನು ಸಿಡಿಮಿಡಿಗೊಳ್ಳುತ್ತಿದ್ದ.

ಹಾಗಾದರೆ ವಿಪರೀತ ಕೆಲಸದಿಂದಾಗಿ ಅವನು ಸಿಡಿಮಿಡಿಗೊಳ್ಳುತ್ತಿದ್ದನೆ ?

ಇಲ್ಲ, ಕೆಲಸಗಳ ಭರಾಟೆಗೆ ತುತ್ತಾದ ಮಿತ್ರರು ನನಗೆ ಅನೇಕ ಮಂದಿ ಇದ್ದಾರೆ. ಒಬ್ಬ ಮಿತ್ರರಿಗೆ ಕಾರಿದೆ, ಆದರೆ ಯಾವಾಗಲೂ ಅವರು ಗೊತ್ತಾದ ವೇಳೆಗೆ ಬರುವುದೇ ಇಲ್ಲ. ಅದರಿಂದಾಗಿ ನಾನೊಬ್ಬನೇ ಅಲ್ಲ, ಅವರ ಇನ್ನೂ ಅನೇಕ ಗೆಳೆಯರಿಗೆ ಅಸಮಾಧಾನ. ತಾವು ಹರಡಿಕೊಂಡ ಕೆಲಸಗಳಿಗೆ ಒಂದು ಗತಿ ಕಾಣಿಸಿ ಬರುವಷ್ಟರಲ್ಲೇ ಪಾಪ ಅವರಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಇನ್ನೊಬ್ಬರು ಪ್ರಿಂಟಿಂಗ್ ಪ್ರೆಸ್ ಮಾಲೀಕರು. ಅವರೂ ಸಹ ತುಂಬ 'ಬಿಜಿ' ಮನುಷ್ಯ. ಈ ಕಾಲದಲ್ಲಿ ಕೆಲಸವಿಲ್ಲದೆ ಅನೇಕ ಮುದ್ರಣಾಲಯಗಳು ಮುಚ್ಚುವುದನ್ನು ನೋಡಿದ್ದೇವೆ. ಆದರೆ ಕೆಲಸದ ಹೊರೆ ಹೆಚ್ಚಾಗಿ ನಿಭಾಯಿಸಲಾಗದೆ ಎಷ್ಟೋ ದಿನ ಇವರ ಪ್ರೆಸ್ ಮುಚ್ಚಬೇಕಾಗಿ ಬಂದಿದೆಯಂತೆ. ಇದು ಅಚ್ಚರಿಯ ಸಂಗತಿಯಾದರೂ ದಿಟ. ಅವರ ಹತ್ತಿರ ಎಷ್ಟು ಕೆಲಸಗಳು ಒಟ್ಟುಗೂಡುತ್ತವೆಯೆಂದರೆ ಒಂದನ್ನೂ ಸಮಯಕ್ಕೆ ಸರಿಯಾಗಿ ಮಾಡಲಾಗುವುದಿಲ್ಲ. ಸಕಾಲದಲ್ಲಿ ಕೆಲಸ ಮುಗಿಯದೆ ಹೋದರೆ ಗಿರಾಕಿಗಳು ಸಿಟ್ಟಾಗುತ್ತಾರೆ. ಅಂಥ ಗಿರಾಕಿಗಳು ಎರಡನೇ ಬಾರಿ ಕೆಲಸ ವಹಿಸಲು ಹಿಂದೇಟುಹಾಕುತ್ತಾರೆ. ಅದರಿಂದಾಗಿ ಅವರು ಅಚ್ಚುಕೂಟಕ್ಕೆ ಬೀಗ ಹಾಕಬೇಕಾಗಿ ಬರುತ್ತದೆ. ಅವರಿಗೆ ಬೇರೆ ಯಾವ ಕೆಲಸವೂ ಗೊತ್ತಿಲ್ಲ. ಮತ್ತೊಂದು ಹೆಸರಿನ ಬೋರ್ಡ್ ಏರಿಸಿ ಅದೇ ಪ್ರೆಸ್ ವ್ಯವಹಾರ ಶುರುಮಾಡುತ್ತಾರೆ.

ಸ್ವಲ್ಪ ವರ್ಷಗಳ ಹಿಂದೆ ನಾನು ಸಹ ಈ 'ಬಿಜಿ' ರಾಕ್ಷಸನ ಮುಷ್ಟಿಯಲ್ಲಿ ಬಲವಾಗಿ ಸಿಕ್ಕಿಕೊಂಡಿದ್ದೆ. ಊಟ ತಿಂಡಿ ಯೋಚನೆಯಿಲ್ಲ, ವಿಶ್ರಾಂತಿಯಂತೂ

ದೂರ. ಯಾವಾಗಲೂ ಕಣ್ಣಮುಂದೆ ರಾಶಿರಾಶಿ ಕೆಲಸ. ಸಾಯೋದಕ್ಕೂ ಪುರುಸೊತ್ತಿಲ್ಲ.

ಆ ದಿನಗಳಲ್ಲಿ ನಾನು ಪ್ರತಿಯೊಂದು ಚೆಕ್‌ಮೇಲೂ ಎರಡೆರಡು ರುಜು ಮಾಡುತ್ತಿದ್ದೆ. ಒಂದರಲ್ಲಿ ಬರೀ ಹೆಸರು, ಇನ್ನೊಂದರಲ್ಲಿ ಸರ್‌ನೇಮ್ ಸೇರಿಸಿದಂಥ ಹೆಸರು. ಜನ ಕೇಳಿದರೆ ಏನೋ ನೆವ ಹೇಳಿ ನುಣಿಚಿಕೊಳ್ಳುತ್ತಿದ್ದೆ. ಆದರೆ ನಿಜವಾದ ಸಂಗತಿಯೆಂದರೆ ಬ್ಯಾಂಕಿನಲ್ಲಿ ಖಾತೆ ತೆಗೆಯುವಾಗ ಯಾವ ರೀತಿಯಲ್ಲಿ ಸಹಿ ಮಾಡಿದ್ದೆ ಎಂಬುದು ಮರೆತುಹೋಗಿತ್ತು. ಮತ್ತೆ ಬ್ಯಾಂಕಿಗೆ ಹೋಗಿ ಸರಿಯಾದ ಸಹಿ ತಿಳಿದುಕೊಳ್ಳಲು ಅರ್ಧ ಗಂಟೆ ದಂಡಮಾಡುವ ಸ್ಥಿತಿಯಲ್ಲಿರಲಿಲ್ಲ ನಾನು. ಹಾಗಾಗಿ ಸಾಧ್ಯವಿದ್ದ ಎರಡೂ ಸಹಿಗಳನ್ನು ಮಾಡಿಬಿಡುತ್ತಿದ್ದೆ. ಯಾವುದು ಸರಿಯೊ ಅದರಿಂದ ಪಾವತಿ ಆಗಲಿ ಎಂಬುದು ನನ್ನ ಭಾವನೆಯಾಗಿತ್ತು.

ಇನ್ನೂ ಒಂದು ವಿಷಯ ನನ್ನ ನೆನಪಿನಲ್ಲಿದೆ. ಆ ದಿನಗಳಲ್ಲಿ ಒಬ್ಬ ಮನುಷ್ಯ ನನ್ನ ಹತ್ತಿರ ಒಂದು ಜಾಹಿರಾತನ್ನು ಬರೆಯಲು ಕೊಟ್ಟಿದ್ದ. ಅದನ್ನು ಪಡೆಯಲು ಒಂದು ಹತ್ತುಬಾರಿ ನನ್ನ ಹತ್ತಿರ ಬಂದಿದ್ದ. ಜಾಹಿರಾತಿನ ಕರಡನ್ನು ನಾನು ಆಗಲೇ ತಯಾರಿಸಿಟ್ಟಿದ್ದೆ. ಅದರ ಅಂತಿಮ ರೂಪವನ್ನು ಬರೆದಿಡಲು ನನಗೆ ಸಮಯ ಸಿಕ್ಕಿರಲಿಲ್ಲ. ಅವನು ಬಂದಾಗಲೆಲ್ಲ ನನಗೆ ಎಷ್ಟೊಂದು ಕೆಲಸ ಇದೆ ಎಂಬ ಅಸಹಾಯಕತೆ ವ್ಯಕ್ತಪಡಿಸಿ ಹಿಂದಕ್ಕೆ ಕಳಿಸುತ್ತಿದ್ದೆ.

ಒಮ್ಮೆ ಒಂದು ಸ್ವಾರಸ್ಯಕರವಾದ ಪ್ರಸಂಗ ನಡೆಯಿತು. ಅವತ್ತು ನನ್ನ ಕೆಲಸಗಳೆಲ್ಲ ಮೇಜಿನ ಮೇಲೆ ಹೇಗೆಂದರೆ ಹಾಗೆ ಬಿದ್ದಿದ್ದವು. ಅವತ್ತು ಸಹ ಅಭ್ಯಾಸಬಲದ ಮೇಲೆ ನಾನು ಸಾಕಷ್ಟು ಮಂದಿಯನ್ನು ಬರಿಗೈಯಲ್ಲಿ ಹಿಂದಕ್ಕೆ ಕಳಿಸಿದ್ದೆ. ಹಿರಿಯ ವಯಸ್ಸಿನ ವ್ಯಕ್ತಿಯೊಬ್ಬರು ನನ್ನ ಕಚೇರಿಯಲ್ಲಿ ಕುಳಿತು ನಾನು ಕೆಲಸಮಾಡುತ್ತಿದ್ದ ವೈಖರಿಯನ್ನು ಗಮನಿಸುತ್ತಿದ್ದರು. ಬೇರೆ ಕೆಲಸಗಳನ್ನು ಬದಿಗಿಟ್ಟು ಅವರ ಕಡೆ ತಿರುಗಿ ಕೇಳಿದೆ—"ಹೇಳಿ, ನಿಮಗೆ ಏನಾಗಬೇಕು ?" ಅವರು ಅಂದರು—"ನೀವು ತುಂಬಾ ಬಿಜಿಯಾಗಿ ಕಾಣುತ್ತೀರಿ. ನನ್ನ ಕೆಲಸವನ್ನು ನಿಮಗೆ ಹೇಳಿ ಹೆಚ್ಚಿನ ಹೊರೆ ಹಾಕಲಾರೆ. ಅಂದಹಾಗೆ ನೀವು ಕೆಲಸ ಮಾಡುವ ರೀತಿಯನ್ನು ನೋಡಿದ ಮೇಲೆ ಒಂದು ಮಾತನ್ನು ಹೇಳದೆ ಇರಲಾರೆ. 'ಕೆಲಸಗಳನ್ನು ಮಾಡಲಾಗಿಲ್ಲ' ಎಂದು ನೀವು ಸಬೂಬು ನೀಡಲು ಖರ್ಚು ಮಾಡುತ್ತಿರುವ ವೇಳೆಯಲ್ಲಿ ಅರ್ಧದಷ್ಟು ಖರ್ಚುಮಾಡಿದರೆ ಸಾಕು. ನಿಮ್ಮ ಕೆಲಸಗಳನ್ನೆಲ್ಲ ಮುಗಿಸಬಹುದು."

ನಾನು ಚಕಿತನಾಗಿ ಅವರ ಕಡೆ ನೋಡಿದೆ. ಆಮೇಲೆ ನನ್ನ ಎದುರಿಗಿದ್ದ ಫೈಲುಗಳ ರಾಶಿಯನ್ನು ಅವರಿಗೆ ತೋರಿಸಿ ನಾನು ಎಷ್ಟು ಬಿಡುವಿಲ್ಲದ ವ್ಯಕ್ತಿ ಅಂತ ಮನವರಿಕೆಮಾಡಿ ಹೇಳಿದೆ. ಅವರು ಫೈಲುಗಳ ರಾಶಿಯ ಮೇಲೆ ದೃಷ್ಟಿ ಇಟ್ಟು ಹೇಳಿದರು—"ಈ ರಾಶಿ ಹೇಗೆ ಆಯಿತು? ನೀವು ಕೆಲಸಗಳು ಬಂದ ತಕ್ಷಣ ಹಾಗೆ ಹಾಗೆ ಅವುಗಳನ್ನು ಮಾಡಿ ಮುಗಿಸಲಿಲ್ಲ. ಆದರಿಂದ ಇಂದಿನಿಂದ ನೀವು ಇವತ್ತಿನ ಕೆಲಸ ಈಗಲೇ ಅಂತ ರೂಢಿ ಮಾಡಿಕೊಂಡರೆ ಒಂದು ಕಾಗದವೂ ಉಳಿಯೋದಿಲ್ಲ."

'ಇವತ್ತಿನ ಕೆಲಸ ಈಗಲೇ' ಎಂಬ ಸಂದೇಶವನ್ನು ಕೊಟ್ಟು ಅವರು ಹೊರಟುಹೋದರು. ಆದರೆ ನಾನು ಕೇವಲ ಮೂರು ಪದಗಳ ಆ ವಾಕ್ಯದ ಬಗ್ಗೆ ಯೋಚನೆ ಮಾಡುತ್ತಲೇ ಕುಳಿತುಬಿಟ್ಟೆ. ಆವರೆಗೆ ನಾನು ನನ್ನ ಕೆಲಸ ಗಳನ್ನು ನಾಳೆ ನಾಳೆ ಅಂತ ಮರುದಿನಕ್ಕೆ ತಳ್ಳುತ್ತಲೇ ಇದ್ದೆ. ಹೀಗೆ ತಳ್ಳುವುದ ರಲ್ಲೇ ನಾನು ಎಷ್ಟು ವೇಳೆಯನ್ನು ಹಾಳುಮಾಡುತ್ತಿದ್ದೆ ಎಂಬ ಗುಟ್ಟು ನನಗೆ ಆ ಕ್ಷಣದಿಂದಲೇ ಅರಿವಾಗತೊಡಗಿತು.

ಒಂದು ಜಾಹಿರಾತಿನ ಕರಡಿನಿಂದ ಅಂತಿಮ ಪ್ರತಿ ತಯಾರಿಸಲು ಎಷ್ಟು ಶ್ರಮ ಹಿಡಿಯುತ್ತದೆಂಬುದನ್ನು ಕುರಿತು ನಾನು ಅನೇಕ ನಿಮಿಷಗಳ ಕಾಲ ಯೋಚಿಸುತ್ತಿದ್ದೆ. ಬಿಡುವೇ ಇಲ್ಲ ಅಂತ ತೊಳಲಾಡುತ್ತಿದ್ದೆ. ಹತ್ತಾರು ಬಾರಿ ಕೈಗೆತ್ತಿಕೊಂಡೂ ಆ ಕೆಲಸ ಮುಂದಕ್ಕೆ ಹಾಕಿದೆ. ಒಂದೊಂದು ಬಾರಿ ತಳ್ಳುವುದ ರಲ್ಲೂ ಖರ್ಚಾದ ನಿಮಿಷಗಳನ್ನು ಒಟ್ಟುಗೂಡಿಸಿದರೆ ಕೆಲವು ಗಂಟೆಗಳೇ ಆಗು ತ್ತಿದ್ದವು. ಆದರೆ ಕೊನೆಗೆ ಪಟ್ಟಾಗಿ ಕುಳಿತಾಗ ಆ ಜಾಹಿರಾತಿನ ಶುದ್ಧ ಪ್ರತಿ ತೆಗೆಯಲು ಹಿಡಿದದ್ದು ಕೆಲವೇ ನಿಮಿಷಗಳು ಮಾತ್ರ.

'ನಮಗೆ ತುಂಬಾ ಕೆಲಸ' ಅನ್ನುವುದರ ಅರ್ಥ ನಮ್ಮ ಮುಂದೆ ರಾಶಿಯಾಗಿ ಬಿದ್ದಿರುವ ಕೆಲಸಗಳ ಪ್ರಮಾಣಕ್ಕೆ ಹೋಲಿಸಿದರೆ ನಮ್ಮ ಕಾರ್ಯದಕ್ಷತೆ ಕಡಮೆ ಎಂದಾಗುತ್ತದೆ. ನಮಗೆ ಎಷ್ಟು ರಾಶಿ ಕೆಲಸಗಳು ಇವೆ ಎಂಬುದರ ಮೇಲೆ ನಮ್ಮ ಯೋಗ್ಯತೆ ಅಳೆಯುವಂತದಲ್ಲ. ಆದರೆ ಅವೇ ಕೆಲಸಗಳನ್ನು ಎಷ್ಟು ಚೆನ್ನಾಗಿ ಮಾಡಿಮುಗಿಸುತ್ತೇವೆ ಎಂಬುದರಲ್ಲಿ ನಮ್ಮ ಸಾಮರ್ಥ್ಯ ಅಡಗಿರುತ್ತದೆ. ನಮ್ಮನ್ನು ತೀರ 'ಬಿಜಿ' ವ್ಯಕ್ತಿಯನ್ನಾಗಿ ಮಾಡಬಹುದಾದ ಗರಿಷ್ಠ ಪ್ರಮಾಣದ ಕೆಲಸಗಳು ನಮಗಿಂತ ಎರಡುಪಟ್ಟು ಕಾರ್ಯದಕ್ಷತೆಯುಳ್ಳ ವ್ಯಕ್ತಿಯ ಪಾಲಿಗೆ ಸಾಕಷ್ಟು ಕಡಮೆ ಎಂದೇ ಅನಿಸಬಹುದು.

ಅಂದಮೇಲೆ ನಾವು ತೀರ 'ಬಿಜಿ' ಆಗಿರುವ ಪಿಡುಗಿನಿಂದ ತಪ್ಪಿಸಿಕೊಳ್ಳ ಬೇಕಾದರೆ ನಮ್ಮ ಕಾರ್ಯದಕ್ಷತೆಯನ್ನು ಹೆಚ್ಚಿಸಿಕೊಳ್ಳಬೇಕು. ಅದಕ್ಕಾಗಿ ನಾವು ಈ 'ಬಿಜಿ' ಬದುಕನ್ನು ಹೆಚ್ಚಿಸುವ ಕಾರಣಗಳು ಏನು ಎಂಬುದನ್ನು ಕಂಡು ಕೊಂಡು ಪರಿಹಾರ ಹುಡುಕಬೇಕು. ಹಾಗಾದರೆ ಇಲ್ಲಿವೆ ನೋಡಿ 'ಬಿಜಿ' ಯನ್ನು ಹೆಚ್ಚಿಸುವ ಮೂರು ಪ್ರಮುಖ ಕಾರಣಗಳು. ಈ ಕಾರಣಗಳನ್ನು ವಿಚಾರ ಮಾಡುವುದರಲ್ಲಷ್ಟೇ ಇವುಗಳ ಪರಿಹಾರವೂ ಅಡಗಿದೆ—

## 1. ಮುಂದೂಡುವುದು

ಮುಂದೂಡುವುದು ಕೆಲಸವನ್ನು ಹಗುರಮಾಡಿಕೊಳ್ಳುವ ಅತ್ಯುತ್ತಮ ಸಾಧನವೆಂದು ಅನೇಕರು ಭಾವಿಸಬಹುದು. ಆದರೆ ಇದು ಸಹ ಒಂದು ಕಷ್ಟದ ಕೆಲಸವೇ ಸರಿ. ಈ ಕೆಲಸ ನಮ್ಮ ಬಹಳಷ್ಟು ಅಮೂಲ್ಯವಾದ ವೇಳೆಯನ್ನು ಕಬಳಿಸಿಬಿಡುತ್ತದೆ. ಕೆಲಸವನ್ನು ಮುಂದಕ್ಕೆ ತಳ್ಳುತ್ತಿರುವ ಸಮಯದಲ್ಲಿ ನಾವು ಸುಮ್ಮನೆ ಅದನ್ನು ಮುಂದಕ್ಕೆ ಹಾಕುತ್ತಿದ್ದೇವೆಯೆ ಹೊರತು ಮುಗಿಸುತ್ತಿಲ್ಲ ಎಂಬುದನ್ನು ಮರೆತುಬಿಡುತ್ತೇವೆ.

ಸಾಕಷ್ಟು ಹಿಂದೆಯೆ ನಾನು ಓದಿದ್ದ ನೆನಪು—'ಸೈನ್ಯ ಮುಂದಕ್ಕೆ ಶಿಸ್ತಿನಿಂದ ಚಲಿಸುತ್ತಿರಬೇಕಾದರೆ, ಒಂದುವೇಳೆ ಮುಂದುಗಡೆ ಇರುವ ಸಿಪಾಯಿಗಳ ನಡಗೆಯಲ್ಲಿ ವ್ಯತ್ಯಾಸ ತಲೆದೋರಿದರೆ ಹಿಂದಿನವರ ನಡಗೆ ಏನಾದರೂ ಸರಿ ಹೋಗದು.' ಹೀಗೆಯೆ ಮುಂಚಿನ ಕೆಲಸಗಳು ನಿಂತುಹೋದರೆ ಅನಂತರದ ಕೆಲಸಗಳ ರಾಶಿಯೆ ಗುಡ್ಡವಾಗಿ ನಿಲ್ಲುತ್ತದೆ. ಒಂದು ಕೆಲಸವನ್ನು ಮಾಡುವುದಕ್ಕೆ ಸಾಧ್ಯವಾಗದೆ ಹೋದರೆ ಅನೇಕ ಕೆಲಸಗಳನ್ನು ಒಟ್ಟಿಗೆ ಮಾಡುವುದು ದುಸ್ತರವೆ ಸರಿ.

ಕೆಲವು ಮಂದಿ ಮಾನ್ಯ ಓದುಗರು ಈ ಸಾಲುಗಳನ್ನು ಓದುತ್ತಿರಬೇಕಾದರೆ ಮನಸ್ಸಿನಲ್ಲೇ ಅಂದುಕೊಳ್ಳುತ್ತಿರಬಹುದು--"ಆಹಾ ಲೇಖಕನೆ! ಕೆಲಸಗಳನ್ನು ಮುಂದೂಡಬೇಡ ಅಂತ ನನಗೆ ಬುದ್ಧಿ ಹೇಳುತ್ತಿದ್ದೀಯಾ? ಸ್ವಲ್ಪ ನನ್ನ ಕುರ್ಚಿಯಲ್ಲಿ ಕುಳಿತು ಜವಾಬ್ದಾರಿ ಹೊತ್ತು ನೋಡು. ನಿನಗೇ ಗೊತ್ತಾಗುತ್ತೆ, ನನಗೆಷ್ಟು ಕೆಲಸಗಳು ಇರುತ್ತವೆ ಅಂತ. ನಾನು ಕೆಲಸವನ್ನು ನನ್ನ ಖುಷಿಗಾಗಿ ಮುಂದಕ್ಕೆ ಹಾಕುವುದಿಲ್ಲ, ಹಾಗೆ ಹಾಕದೆ ನನಗೆ ಬೇರೆ ದಾರಿ ಇರುವುದಿಲ್ಲ."

ಬಹುಶಃ ಅವರ ಮಾತು ಸರಿಯಾಗಿಯೆ ಇರಬಹುದು. ಅವರ ಪರಿಸ್ಥಿತಿ ಅವರಷ್ಟು ಚೆನ್ನಾಗಿ ಖಂಡಿತ ನನಗೆ ಗೊತ್ತಿಲ್ಲ! ಆದರೆ ಈ ವಾಸ್ತವಾಂಶ ಅವರಿಗೆ

ಸಹ ಗೊತ್ತಿರದೆ ಇರಲು ಸಾಧ್ಯವಿಲ್ಲ—ಮುಂದೂಡುವುದು ಅಂದರೆ ನಾಳೆ 'ಬಿಜಿ' ಯಾಗಿರುವುದಕ್ಕೆ ಇವತ್ತೇ ಏರ್ಪಾಟುಮಾಡಿಕೊಳ್ಳುವುದು.

ಹಾಗೆಯೆ ನಾಳೆಯದು ನಾಡಿದ್ದಿಗೆ, ನಾಡಿದ್ದಿನದು ಆಚೆನಾಡಿದ್ದಿಗೆ—ಸರಣಿ ಹೀಗೆಯೆ ಮುಂದುವರಿಯುತ್ತದೆ. ಈ ಸರಣಿಯನ್ನು ನಿಲ್ಲಿಸಬೇಕೆಂದರೆ ಒಂದೇ ಮಾರ್ಗ ಏನೆಂದರೆ ಒಂದೇ ಬಾರಿಗೆ ಕುಳಿತು ಹೆಚ್ಚು ಕೆಲಸ ಮಾಡಿ ಎಲ್ಲವನ್ನೂ ಮುಗಿಸಿಹಾಕುವುದು. ಇನ್ನುಮೇಲೆ ಈ ಮೂರು ಪದಗಳ ವಾಕ್ಯ ನಿಮ್ಮ ಬದುಕಿನ ಸೂತ್ರವಾಗಲಿ—

'ಇವತ್ತಿನ ಕೆಲಸ ಈಗಲೇ.'

## 2. ಅಂದಾಜು ಮಾಡಬೇಕಾದರೆ ಎಡವುವುದು

ಈ ಪ್ರಬಂಧದ ಮೊದಲಲ್ಲೇ ನಾನು ನನ್ನ ಕಾರಿನ ಗೆಳೆಯನ ಬಗ್ಗೆ ಹೇಳಿದ್ದೆನಷ್ಟೆ. ಕಾರಿದ್ದರೂ ಆತ ಎಂದೂ ವೇಳೆಗೆ ಸರಿಯಾಗಿ ಎಲ್ಲಿಗೂ ಬಂದು ತಲುಪುತ್ತಿರಲಿಲ್ಲ. ಇದಕ್ಕೆ ಕಾರಣ ತಾನು ತುಂಬ ಬಿಜಿ ಅಂತ ಆತ ಹೇಳಿಕೊಳ್ಳುತ್ತಾನೆ. ಆದರೆ ನಿಜವಾದ ಸಂಗತಿ ಏನೆಂದರೆ ಈ ರೀತಿ ತಡವಾಗುವುದಕ್ಕೆ ಮುಖ್ಯ ಕಾರಣ ಆತ ಯಾವುದೇ ಕೆಲಸ ಮಾಡಬೇಕಾದರೆ ಎಷ್ಟು ವೇಳೆ ಹಿಡಿಯುತ್ತದೆ ಎಂದು ಅಂದಾಜು ಮಾಡುವುದರಲ್ಲಿ ತಪ್ಪುತ್ತಾನೆ. ಅವನು ಹನ್ನೆರಡು ಗಂಟೆ ಹೊತ್ತಿಗೆ ಎಲ್ಲಿಗಾದರೂ ಹೋಗಬೇಕೆಂದರೆ ಹತ್ತು ಗಂಟೆಯಲ್ಲಿ ಹೀಗೆ ಯೋಚಿಸುತ್ತಾನೆ—ಹನ್ನೆರಡು ಹೊಡೆಯಲು ಇನ್ನೂ ಎರಡು ಗಂಟೆ ಬಾಕಿ ಇದೆ. ಮಾಡೋ ಅಷ್ಟು ಕೆಲಸ ಅಷ್ಟರಲ್ಲಿ ಮಾಡೇಬಿಡೋಣ. ಕಾರು ಹತ್ತಿರವೆ ಇದೆ. ಬೇಕೆಂದಾಗ ತಕ್ಷಣ ಹೋದರಾಯಿತು.

ಹೀಗೆ ಅಂದುಕೊಳ್ಳುತ್ತಾ ಅವನು ತನ್ನ ಮುಂದೆ ಕೆಲಸಗಳನ್ನು ಹರಡಿಕೊಳ್ಳುತ್ತಾನೆ. ಅವನ್ನು ಒಂದು ಘಟ್ಟಕ್ಕೆ ತರುವಷ್ಟರಲ್ಲಿ ಒಂದು ಗಂಟೆ ಹೊಡೆಯುತ್ತದೆ. ಅನಂತರ ಗಡಿಬಿಡಿಯಲ್ಲೇ ಕೆಲಸ ಮುಂದುವರೆಯುತ್ತದೆ —ಕೆಲವು ಅರ್ಧಮರ್ಧ, ಕೆಲವು ಪೆಂಡಿಂಗ್. ಕಾರಿನಲ್ಲಿ ಕುಳಿತಾಗ ರಸ್ತೆಯಲ್ಲಿ ಕೆಂಪುದೀಪ ಹತ್ತಿಕೊಳ್ಳುತ್ತದೆ, ಕೆಲವೆಡೆಗಳಲ್ಲಿ ಮೆರವಣಿಗೆ ಅಡ್ಡ ಹಾಕುತ್ತದೆ. ಅವನು ಉದ್ವಿಗ್ನಗೊಳ್ಳುತ್ತಾನೆ, ದಾರಿಯಲ್ಲಿ ಇಂಥ ಅಡಚಣೆಗಳು ಆಕಸ್ಮಿಕವಾಗಿ ಉಂಟಾಗಬಹುದೆಂದು ಅವನು ಅಂದಾಜು ಮಾಡಿರುವುದಿಲ್ಲ. ಗೊತ್ತಾದ ಜಾಗಕ್ಕೆ ಅವನು ತಲಪುವಷ್ಟರಲ್ಲಿ ಒಂದೂವರೆ ಹೊಡೆದಿರುತ್ತದೆ. ತಡವಾದುದಕ್ಕೆ ಕಾರಣ—ಛೇ, ಅದೇನು ರಾಶಿ ಕೆಲಸ ಅಂತೀರಿ !

ಇದರಲ್ಲಿ ಕೆಲಸದ ತಪ್ಪು ಎಷ್ಟರಮಟ್ಟಿನದು ಅಂತ ಸ್ವಲ್ಪ ಯೋಚಿಸಿ. ನ್ನ ಮುಂದೆ ಕೆಲಸ ಹರಡಿಕೊಳ್ಳುವುದಕ್ಕೆ ಮುಂಚೆ ಅವನು ಯಾವ ಕೆಲಸಕ್ಕೆ ಷ್ಟು ಹೊತ್ತು ಹಿಡಿಯುತ್ತದೆ, ತನ್ನ ಹತ್ತಿರ ಎಷ್ಟು ಹೊತ್ತಿದೆ ಅಂತ ಂದಾಜು ಮಾಡಿ ಅಷ್ಟೇ ಕೆಲಸಗಳನ್ನು ಮುಂದಿಟ್ಟುಕೊಂಡರೆ ಹನ್ನೊಂದೂವರೆ ಲ್ಲವೆ ಹನ್ನೊಂದೂಮುಕ್ಕಾಲರ ಹೊತ್ತಿಗೆ ಕೆಲಸ ಮುಗಿಸಿ ಹೊರಡಬಹುದು. ಯಾವುದೇ ರೀತಿಯ ಉದ್ವಿಗ್ನತೆ ಇರುವುದಿಲ್ಲ. ತನ್ನ ಬಳಿ ಕಾರಿದೆ, ತಾನು ಕಾರಿಹೋಗಬಹುದು ಅಂತ ಅವನು ಯೋಚಿಸುತ್ತಾನೆ. ಅವನ ಬಳಿ ಕಾರೇನು, ಾಕೆಟ್ ಇದ್ದರೂ ಅವನು ಸರಿಯಾದ ವೇಳೆಗೆ ಬಂದು ತಲುಪಲಾರ ಅಂತ ನಾನು ೇಳುತ್ತೇನೆ. ಏಕೆಂದರೆ ಅವನಿಗೆ ಅಂದಾಜುಮಾಡುವುದರ ಮಹತ್ವ ಏನೆಂದು ರಿವಾಗಿರುವುದಿಲ್ಲ. ಅವನಿಗಿಂತಲೂ ತುಂಬ ಕಾರ್ಯಮಗ್ನರಾದ ವ್ಯಕ್ತಿಗಳು ಸ್ಸುಗಳಲ್ಲೋ ಬಾಡಿಗೆ ವಾಹನಗಳಲ್ಲೋ ಅವನಿಗಿಂತ ಮುಂಚೆ ಸಕಾಲದಲ್ಲಿ ಲುಪಬಲ್ಲರು.

ಮೇಲೆ ಹೇಳಿದ ಪ್ರಿಂಟಿಂಗ್ ಪ್ರೆಸ್ ಮಾಲಿಕನ ಕಾರ್ಯಬಾಹುಳ್ಯದ ಕಾರಣ ಹ ತಪ್ಪು ಅಂದಾಜು ಮಾಡುವುದು ಅಂತ ಭಾವಿಸುತ್ತೇನೆ. ಅವನು ಗಿರಾಕಿಗೆ ಶ್ವಾಸನೆ ನೀಡಬೇಕಾದರೆ—ಸಿಬ್ಬಂದಿಯ ಕಾಫಿ, ಊಟಕ್ಕಾಗಿ ವ್ಯಯವಾಗುವ ಲ, ಅಚ್ಚು ಮೊಳೆಗಳು ಜೋಡಣೆಯ ಹಂತದಲ್ಲಿ ಲಾಕ್ ಆಗಿ ಉಳಿದುಬಿಡುವ ಲ ಹಾಗೂ ಇನ್ನಿತರ ಆಕಸ್ಮಿಕ ಕಾರಣಗಳಿಂದ ನಷ್ಟವಾಗಬಹುದಾದ ವೇಳೆ ುನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಇದರಿಂದ ಏನಾಗುತ್ತದೆಂದರೆ ಅವನು ಯಾವ ಕೆಲಸವನ್ನೂ ಗೊತ್ತಾದ ವೇಳೆಗೆ ಮುಗಿಸಲಾರ. ಗಿರಾಕಿ ತಲೆಮೇಲೆ ುತುಕೊಂಡಾಗ ಅದೂ ಇದೂ ಸಬೂಬು ಹೇಳಿಕಳಿಸುವುದಾಗುತ್ತದೆ. 'ಅವನ' ಲಸವನ್ನು ಮಿಷೀನಿನಿಂದ ಇಳಿಸಿ 'ಇವನ' ಕೆಲಸವನ್ನು ಏರಿಸುತ್ತಾನೆ. 'ಅವನು' ಂದು ಕೇಳಿದಾಗ ಮಗದೊಬ್ಬನ ಕೆಲಸ ನಾಲ್ಕಾರು ದಿನಗಳು ಮುಂದೆಹೋಗು ುದೆ. ಆ ಮಗದೊಬ್ಬನು ಬಂದಾಗ ಅವನ ಹತ್ತಿರ ಕ್ಷಮೆ ಕೇಳುತ್ತಾನೆ. ನಾಲ್ಕನೆ ುವನಿಗೆ ಏನೋ ನೆವಹೇಳಿ ತಳ್ಳುತ್ತಾನೆ. ಒಟ್ಟಿನಲ್ಲಿ ಎಲ್ಲ ಅರ್ಧಮರ್ಧ. ರಾಕಿಗಳಿಗೆಲ್ಲ ಬೇಸರ ತಲೆನೋವು.

ತಪ್ಪು ಅಂದಾಜು ಮಾಡುವ ಮನುಷ್ಯರು ಬದುಕಿನ ಎಲ್ಲ ಕ್ಷೇತ್ರಗಳಲ್ಲೂ ದೇ ತಪ್ಪನ್ನು ಮಾಡುತ್ತಾ ಹೋಗುತ್ತಾರೆ. ಅವನು ದಾರಿ ಹೋಕನೊಬ್ಬನಿಗೆ ಂದೆರಡು ಫರ್ಲಾಂಗ್ ಎಂದು ಹೇಳಿದ್ದು ಒಂದೆರಡು ಮೈಲಿ ದೂರವಾಗ

ಬಹುದು. ಅವರ ಒಂದು ನಿಮಿಷದಲ್ಲಿ ಗಡಿಯಾರದ ಗಂಟೆಯ ಮುಳ್ಳು ಇಡೀ ಒಂದು ಸುತ್ತು ಹೊಡೆದು ಬರಬಹುದು.

ಆದ್ದರಿಂದ ಯಾರಿಗೇ ಆಗಲಿ ಸ್ವಂತ ತಮ್ಮನ್ನು ಹಾಗೂ ಬೇರೆಯವರನ್ನು ಇಂಥ ಪರಿಸ್ಥಿತಿಯಲ್ಲಿ ಸಿಕ್ಕಿಸದೆ ಇರಬೇಕಾದರೆ ಸರಿಯಾಗಿ ಅಂದಾಜುಮಾಡುವುದು ತುಂಬ ಅಗತ್ಯವಾದ ಒಂದು ಹೆಜ್ಜೆ. 'ಬಿಜಿ'ಯ ಭ್ರಮೆಯಿಂದ ತಪ್ಪಿಸಿಕೊಳ್ಳಲು ಕೂಡ ಇದು ನೆರವಾಗುತ್ತದೆ. ನಮ್ಮ ಮುಂದೆ ಕೆಲಸ ಗುಡ್ಡವಾಗಲು ಇದು ಅವಕಾಶ ಕೊಡುವುದಿಲ್ಲ. ನಮ್ಮ ವಾಗ್ದಾನಗಳು ಆಶ್ವಾಸನೆಗಳು ಹುಸಿಯಾಗದೆ ಹೋಗದಂತೆ ರಕ್ಷಿಸುತ್ತದೆ. ಸರಿಯಾಗಿ ಅಂದಾಜು ಮಾಡುವ ಮನುಷ್ಯ ತನ್ನ ಮುಂದೆ ಸಾಧ್ಯವಾದಷ್ಟು ಕೆಲಸಗಳನ್ನು ಮಾತ್ರ ಇಟ್ಟುಕೊಳ್ಳುತ್ತಾನೆ. ಸಕಾಲದಲ್ಲಿ ಅವುಗಳನ್ನು ಮುಗಿಸಲು ತತ್ಪರನಾಗುತ್ತಾನೆ. ಎದುರಿಗೆ ಬಿದ್ದಿರುವ ಮುಂಗಿಯದ ಕೆಲಸಗಳು ಅವನ ಪಾಲಿಗೆ ತಲೆನೋವಾಗಿ ಪರಿಣಮಿಸುವುದಿಲ್ಲ.

## 3. ಅವ್ಯವಸ್ಥೆ

ಮೇಲೆ ಹೇಳಿದ ಜನರಲ್ ಸ್ಟೋರ್ಸ್ ಮಾಲಿಕನದು ತನಗೆ ಬಿಡುವೇ ಇಲ್ಲ ಅಂತ ನಿತ್ಯದ ದೂರು. ಅವನು ರಬ್ಬರು ಮೊಹರುಗಳ ರಾಶಿಯಿಂದ ಒಂದು ಮೊಹರನ್ನು ಹುಡುಕಿ ತೆಗೆಯಲು ಪ್ರತಿಸಾರಿ ಎರಡು ನಿಮಿಷ ಖರ್ಚುಮಾಡಲು ಸಿದ್ಧ. ಪ್ರತಿದಿನ ಅವನು ಇಪ್ಪತ್ತು ಬಾರಿ ಮೊಹರನ್ನು ಹುಡುಕಬೇಕಾಗಿ ಬಂದಲ್ಲಿ ಸಲೀಸಾಗಿ ನಿತ್ಯ ನಲವತ್ತು ನಿಮಿಷಗಳು ಕಳೆದುಹೋಗುತ್ತವೆ. ಆದರೆ ಅವನು ಒಂದುಸಾರಿ ಗಟ್ಟಿಯಾಗಿ ಕುಳಿತು ಮೊಹರುಗಳನ್ನು ತನಗೆ ಬೇಕಾದ ಹಾಗೆ ವಿಂಗಡಿಸಿಕೊಳ್ಳಲಾರ. ಬೇಡದ ಮೊಹರುಗಳನ್ನು ಅಥವಾ ಅಪರೂಪವಾಗಿ ಬೇಕಾದ ಮೊಹರುಗಳನ್ನು ಅವನು ಪ್ರತ್ಯೇಕವಾಗಿ ತೆಗೆದಿಡಲಾರ.

'ಬಿಡುವಿಲ್ಲ, ಬಿಡುವಿಲ್ಲ!' ಇದು ನಮ್ಮಲ್ಲಿ ಬಹುಮಂದಿಯ ನಿತ್ಯದ ಕೂಗು. ಆದರೆ ಅವ್ಯವಸ್ಥಿತವಾಗಿ ನಾವು ಕೆಲಸಮಾಡಿ ಎಷ್ಟು ವೇಳೆಯನ್ನು ಅಪವ್ಯಯ ಮಾಡುತ್ತೇವೆ ಎಂಬುದರ ಪರಿಗಣನೆ ನಮಗೆ ಇರುವುದಿಲ್ಲ.

ಸರ್ ವಿಲಿಯಂ ಓಸ್ಲರ್ ಪ್ರಶ್ನೆ ಮಾಡಿದ್ದ—'ಕಡಮೆ ದುಡಿಮೆ ಮಾಡಿ ನೀವು ನಿಮ್ಮ ಸಾಮರ್ಥ್ಯದಿಂದ ಹೇಗೆ ಹೆಚ್ಚು ಲಾಭ ಪಡೆದುಕೊಳ್ಳಬಲ್ಲಿರಿ ?'

ತನ್ನ ಪ್ರಶ್ನೆಗೆ ಅವನು ತಾನೇ ಸ್ವತಃ ಉತ್ತರ ಕೊಟ್ಟಿದ್ದ—'ವ್ಯವಸ್ಥಿತವಾಗಿ ಕೆಲಸ ಮಾಡುವುದರಿಂದ.'

ಆದರೆ ನಾವು ಮಾಡುತ್ತಿರುವುದೇನು ?

ನಾವು ನಮ್ಮ ಇಂದಿನ, ನಾಳೆಯ, ನಾಡಿದ್ದಿನ ಏಕೆ ಇಡೀ ವಾರದ ಕೆಲಸವನ್ನು ಗುಂಡ್ಡೆ ಹಾಕಿಕೊಳ್ಳುತ್ತೇವೆ. ನಾವು ಈಗ ಮಾಡದೆ ಇರುವ ಕೆಲಸವನ್ನು ಪಕ್ಕಕ್ಕೆ ಇಟ್ಟು ಮಾಡುತ್ತಿರುವ ಕೆಲಸವನ್ನು ಮಾತ್ರ ಮುಂದಿಟ್ಟುಕೊಳ್ಳುವ ಅಭ್ಯಾಸವನ್ನು ಮಾಡಿಕೊಳ್ಳುವುದಿಲ್ಲ.

ನಮ್ಮ ಮುಂದೆ ಇಡೀ ವಾರದ ಕೆಲಸಗಳನ್ನು ರಾಶಿ ಹಾಕಿಕೊಳ್ಳುವುದರಿಂದ ಒಂದು ಲಾಭ ಇದೆ ಅಂತ ನನಗನಿಸುತ್ತದೆ—ಅದೇನೆಂದರೆ ಜನರು ನಾವು ನಿಜವಾಗಿಯೂ ತುಂಬ ಕಾರ್ಯಮಗ್ನರು, 'ಬಿಜಿ' ಅಂತ ತಿಳಿದುಕೊಳ್ಳುತ್ತಾರೆ.

ಯಾರೇ ಆಗಲಿ ತಮ್ಮನ್ನು ತಾವು 'ಬಿಜಿ-ಮನುಷ್ಯ' ಅಂತ ತೋರಿಸಿಕೊಳ್ಳುವ ವ್ಯಾಮೋಹವನ್ನು ದೂರ ಮಾಡಿ ನಿಜವಾಗಿಯೂ ತಮ್ಮ ಕೆಲಸಗಳನ್ನು ವ್ಯವಸ್ಥಿತವಾಗಿ ಮಾಡಬೇಕಾದರೆ

—ಮುಗಿದುಹೋದ ಕೆಲಸವನ್ನು ಪಕ್ಕಕ್ಕೆ ತೆಗೆದಿಡಿ.

—ಆಮೇಲೆ ಮಾಡಬೇಕಾದ ಕೆಲಸವನ್ನು ಸಹ ಬದಿಗೆ ಸರಿಸಿ.

—ಈಗ ಮಾಡಬೇಕಾದ ಕೆಲಸವನ್ನು ಮಾತ್ರ ಮುಂದಿಟ್ಟುಕೊಳ್ಳಿ





೫

# ನಿಮಗೆ ನೆನಪಿನ ಶಕ್ತಿ ಕಡಮೆಯೆ ?

ನಿಮಗೆ ನೆನಪಿನ ಶಕ್ತಿ ಕಡಮೆಯೆ ?

ನೂರಕ್ಕೆ ತೊಂಬತ್ತು ಮಂದಿ ಈ ಪ್ರಶ್ನೆಗೆ 'ಹೌದು' ಎಂದು ಉತ್ತರ ಕೊಡುತ್ತಾರೆ.

ಆದರೆ ವಾಸ್ತವವಾಗಿ ಈ ತೊಂಬತ್ತು ಮಂದಿಯ ನೆನಪಿನ ಶಕ್ತಿ ಅವರು ಅಂದುಕೊಂಡಿರುವಷ್ಟರ ಮಟ್ಟಿಗೆ ಕಡಮೆಯಾಗಿರುತ್ತದೆಯೆ ?

ಈ ಸಮಸ್ಯೆಯನ್ನು ಕುರಿತಂತೆ ವಿಶದವಾಗಿ ವಿಚಾರಮಾಡುವ ಮೊದಲು ಮರೆಯುವ ವೈಖರಿಗಳ ಬಗೆಗೆ ಕೆಲವು ಅಂಶಗಳನ್ನು ಅರಿತುಕೊಂಡರೆ ಸುಲಭವಾಗುತ್ತದೆ.

ಮರೆವಿಗೆ ಗುರಿಯಾದ ಜನರಲ್ಲಿ ಮೊದಲು ಇಂಥ ವಿದ್ಯಾರ್ಥಿಯೊಬ್ಬನನ್ನು ತೆಗೆದುಕೊಳ್ಳಿ. ಇವನಿಗೆ ಪಠ್ಯಪುಸ್ತಕಗಳ ಪೈಕಿ ಯಾವುದೇ ಪುಸ್ತಕದ ಯಾವ

ಅಧ್ಯಾಯವೂ ನೆನಪಿಗೆ ಬರುವುದಿಲ್ಲ. ಅಪ್ಪ-ಅಮ್ಮ ಚೆನ್ನಾಗಿ ಹಾಲು ಕುಡಿಸಿದ್ದಾರೆ, ತುಪ್ಪ ತಿನ್ನಿಸಿದ್ದಾರೆ. ಆದರೂ ಯಾವುದೇ ಪ್ರಯೋಜನವಿಲ್ಲ.

ಎರಡನೇ ಉದಾಹರಣೆ. ಫ್ರಾಯ್ಡನ ಪುಸ್ತಕದಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿರುವ ವಿಜ್ಞಾನಿಯದು. ಈತನ ಮದುವೆ ನಡೆಯಲಿಲ್ಲ. ಏಕೆಂದರೆ ಮದುವೆಯ ಸರಿಯಾದ ವೇಳೆಗೆ ಅವನು ಚರ್ಚಿಗೆ ಹೋಗುವುದರ ಬದಲು ತನ್ನ ಪ್ರಯೋಗ ಶಾಲೆಯ ಒಳಹೊಕ್ಕಿದ್ದ.

ಇಳಿ ವಯಸ್ಸಿನಲ್ಲಿ ಅನೇಕಮಂದಿ ತಮಗೆ ಏನೂ ನೆನಪಿಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲವೆಂದು ಪೇಚಾಡುತ್ತಿರುತ್ತಾರೆ. ನಮ್ಮ ತಾಯಿಗೆ ವಯಸ್ಸಾಗಿದೆ. ಹಾಗಾಗಿ ಮೊಮ್ಮಕ್ಕಳ ಹೆಸರನ್ನೂ ಒಮ್ಮೊಮ್ಮೆ ಮರೆತುಬಿಡುತ್ತಾಳೆ.

ನನ್ನ ಗೆಳೆಯನದೊಂದು ಉದಾಹರಣೆ. ಅವನಿಗೆ ಒಮ್ಮೊಮ್ಮೆ ತನ್ನ ತಂದೆತಾಯಿಗಳಿಗೆ ಕಾಗದ ಬರೆಯುವುದು ಮರೆತುಹೋಗುತ್ತದೆ. ಕಚೇರಿಯಲ್ಲಿ ಬರೆದುಬಿಡೋಣ ಎಂದು ಮನೆಯಲ್ಲಿ ಯೋಚಿಸುತ್ತಾನೆ. ಮನೆಗೆ ಹೋದಮೇಲೆ ಬರೆದು ಬಿಟ್ಟರಾಯಿತು ಅಂತ ಕಚೇರಿಯಲ್ಲಿ ಕುಳಿತು ಅಂದುಕೊಳ್ಳುತ್ತಾನೆ. ಬರೆಯಲೇಬೇಕೆಂದು ಪಟ್ಟುಹಿಡಿದು ಕುಳಿತಾಗ ಪೋಸ್ಟ್‌ಕಾರ್ಡ್ ಕೈಗೆ ಸಿಗುವುದಿಲ್ಲ. ಒಂದುವೇಳೆ ಪೋಸ್ಟ್ ಕಾರ್ಡ್ ಸಿಕ್ಕಿ ಕಾಗದ ಬರೆದರೂ ಅಂಚೆ ಪೆಟ್ಟಿಗೆಗೆ ಹಾಕಲು ಮರೆತುಬಿಡುತ್ತಾನೆ.

ಯಾವುದಾದರೂ ಪದಾರ್ಥವನ್ನು ಎಲ್ಲಾದರೂ ಇಟ್ಟು ಆಗಾಗ್ಗೆ ನಾವು ಮರೆತುಬಿಡುತ್ತೇವೆ. ಅದನ್ನು ಹುಡುಕಲು ಆಮೇಲೆ ಬಹಳ ಹೊತ್ತು ಮನೆಯೆಲ್ಲ ತಡಕಾಡುತ್ತೇವೆ.

ಪ್ರಯಾಣಕ್ಕೆ ಹೋಗಬೇಕಾದರೆ ಅಗತ್ಯವಾದ ಸಾಮಾನುಗಳನ್ನು ಮರೆತು ಬಿಡುವವರ ಸಂಖ್ಯೆ ಸಾಕಷ್ಟು ದೊಡ್ಡದಿದೆ.

ಹೀಗೆಯೆ ಅನೇಕ ಮಂದಿಯ ಹೆಸರುಗಳು ಮತ್ತು ಅವರು ಕೊಟ್ಟ, ಆಡಿದ ಮಾತುಗಳನ್ನು ಸಹ ನೆನಪಿನಲ್ಲಿಟ್ಟುಕೊಳ್ಳಲು ನಮಗೆ ಸಾಧ್ಯವಾಗುವುದಿಲ್ಲ.

ಎಷ್ಟೋ ವೇಳೆ ಆಹ್ವಾನ ಪತ್ರಿಕೆ ಬಂದಿದ್ದರೂ ನಾವು ಸಕಾಲದಲ್ಲಿ ಆ ಸ್ಥಳಕ್ಕೆ ಹೋಗುವುದನ್ನು ಮರೆತುಬಿಡುತ್ತೇವೆ. ಅದಾದಮೇಲೆ ಯಾವಾಗಲೊ ಅದರ ಬಗ್ಗೆ ನೆನಪಾಗುತ್ತದೆ. ಅಷ್ಟರಲ್ಲಿ ವೇಳೆ ತುಂಬ ಮೀರಿ ಹೋಗಿರುತ್ತದೆ.

ರಾತ್ರಿ ಕಂಡ ಕನಸು ಬೆಳಗ್ಗೆ ಎದ್ದ ಮೇಲೆ ನೆನಪಿನಲ್ಲಿ ಉಳಿಯದೆ ಹೋಗು

ವುದು ಎಲ್ಲರೂ ಬಲ್ಲ ವಿಚಾರ. ನೆನಪಿನ ಶಕ್ತಿ ಕಡಮೆಯಾಗಿರುವುದು ಇದಕ್ಕೆ ಕಾರಣವೆಂದು ಕೆಲವರ ಅನಿಸಿಕೆ.

ನನಗಂತೂ ಯಾವತ್ತೂ ಅಂದಿನ ತಾರೀಖು ಯಾವುದು ಎಂದು ನೆನಪಿನಲ್ಲಿರುವುದಿಲ್ಲ. ಮಾತಾಡುತ್ತಿದ್ದ ಹಾಗೆಯೆ ನಾನು ಏನು ಹೇಳುತ್ತಿದ್ದೆ ಎನ್ನುವುದನ್ನು ಮರೆತುಬಿಡುತ್ತೇನೆ. ಆದರೂ ನನ್ನ ಜ್ಞಾಪಕಶಕ್ತಿ ತುಂಬಾ ತೀಕ್ಷ್ಣವಾಗಿದೆ ಎಂದು ಗೆಳೆಯರು ಮತ್ತು ಸಮೀಪವರ್ತಿಗಳು ಹೇಳಿದಾಗ ನನಗೆ ಅಚ್ಚರಿಯಾಗುತ್ತದೆ. ನನ್ನ ನೆನಪು ಚುರುಕಾಗಿದೆಯೆಂದು ಬೇರೆಯವರು ಯಾತಕ್ಕೆ ಹೇಳುತ್ತಾರೆ ಎಂಬ ಕಾರಣವನ್ನು ಸಹ ಈ ಮುಂದೆ ಸ್ಪಷ್ಟಪಡಿಸುತ್ತಿದ್ದೇನೆ. ಅದಕ್ಕೆ ಮುಂಚೆ ಸದ್ಯಕ್ಕೆ ನೂರಕ್ಕೆ ತೊಂಬತ್ತುಮಂದಿ ತಮ್ಮ ತಮ್ಮ ಜ್ಞಾಪಕ ಶಕ್ತಿಯ ಬಗೆಗೆ ಸರಿಯಾದ ಅಭಿಪ್ರಾಯವನ್ನು ಇಟ್ಟುಕೊಂಡಿದ್ದಾರೆಯೆ ಪರಿಶೀಲಿಸಬೇಕು.

ಶರೀರಶಾಸ್ತ್ರಜ್ಞರ ಅಭಿಪ್ರಾಯದಂತೆ ನಮ್ಮ ಮಿದುಳಿನಲ್ಲಿ ರೈಬೊ ನ್ಯೂಕ್ಲಿಯೆಕ್ ಆಮ್ಲ ಎಂಬ ಪದಾರ್ಥ ಇರುತ್ತದೆ. ಈ ಆಮ್ಲದ ಪ್ರಮಾಣ ಕಡಮೆಯಾದರೆ ನಮ್ಮ ನೆನಪಿನಶಕ್ತಿ ಕಡಮೆ ಆಗುತ್ತದೆ, ಇದು ಹೆಚ್ಚಾಗಿದ್ದಲ್ಲಿ ನೆನಪು ಚುರುಕಾಗಿರುತ್ತದೆ ಎಂದು ಅವರ ಅಂಬೋಣ. ಈ ಆಮ್ಲದ ಉತ್ಪಾದನೆ ನಲವತ್ತು ವರ್ಷದವರೆಗೆ ಹೆಚ್ಚುತ್ತಿದ್ದು ಆಮೇಲೆ ಇಳಿಮುಖವಾಗುತ್ತದಂತೆ. ಆದ್ದರಿಂದಲೇ ಇಳಿವಯಸ್ಸಿನಲ್ಲಿ ನೆನಪಿನಶಕ್ತಿ ಕುಂಠಿತವಾಗುವುದು.

ಈ ಆಮ್ಲದ ಮೇಲೆ ನಾವು ಯಾವುದೇ ಅಧಿಕಾರ ಚಲಾಯಿಸುವಂತಿಲ್ಲ. ಆದರೆ ನಮಗೆ ಇರುವಷ್ಟು ನೆನಪಿನ ಶಕ್ತಿಯನ್ನೇ ವ್ಯವಸ್ಥಿತ ರೂಪದಲ್ಲಿ ಬಳಕೆ ಮಾಡತೊಡಗಿದರೆ ನಾವು ಮೊದಲಿಗಿಂತ ಹೆಚ್ಚು ಚುರುಕು ನೆನಪಿನವರಾಗಬಹುದು.

ನಮಗೆ ವಯಸ್ಸು ಹೆಚ್ಚಿದಂತೆಲ್ಲ ನಮ್ಮ ನೆನಪಿನ ಭಂಡಾರದ ಮೇಲೆ ಹೊರೆ ಹೆಚ್ಚುತ್ತಾ ಹೋಗುತ್ತದೆ. ಹೆಚ್ಚುತ್ತಿರುವ ವ್ಯಾಪಾರ ಮತ್ತಿತರ ವಹಿವಾಟುಗಳಿಗಾಗಿ ಅನೇಕಮಂದಿ ಸಹಾಯಕರನ್ನು ನೇಮಿಸಿಕೊಳ್ಳುವ ನಾವು ಹೆಚ್ಚುತ್ತಿರುವ ನೆನಪಿನ ಭಾರವನ್ನು ಹಂಚಿಕೊಳ್ಳಲು ಏನನ್ನೂ ಹುಡುಕುವತ್ತ ಗಮನ ಹರಿಸುವುದಿಲ್ಲ. ಇದರಿಂದ ಒಟ್ಟಿನಲ್ಲಿ ಏನಾಗುತ್ತದೆಂದರೆ ನಮಗೆ ನಮ್ಮ ನೆನಪಿನ ಶಕ್ತಿಯ ಮೇಲೆಯೆ ಅನುಮಾನ ಹುಟ್ಟತೊಡಗುತ್ತದೆ. ನಾಲ್ಕಾರುಬಾರಿ ಉದ್ದಕ್ಕೂ ನಾವು ಕೆಲವಾರು ತೀರ ಅಗತ್ಯದ ಕೆಲಸಗಳನ್ನು ಮರೆತೆವೆಂದರೆ ಈ ಅನುಮಾನ ಭೂತಾಕಾರವಾಗಿ ಕಾಡತೊಡಗುತ್ತದೆ. ನೆನಪಿನ ಶಕ್ತಿ ಇಳಿಮುಖ

ವಾಗುತ್ತಿರುವುದು ಒಂದು ನಿವಾರಿಸಲಾಗದ ಪಿಡುಗು ಅಥವಾ ಖಾಯಿಲೆಯೆಂದು ಒಪ್ಪಿಕೊಳ್ಳುವ ನಾವು ಸುಲಭವಾಗಿಯೆ ನಮ್ಮನ್ನು ಮರೆಗುಳಿಗಳೆಂದು ಘೋಷಿಸಿ ಕೊಳ್ಳುತ್ತೇವೆ.

ಆದರೆ ಸಾಮಾನ್ಯವಾಗಿ ನಾವು ಯಾವುದನ್ನು ನೆನಪು ಕಡಮೆಯಾಗುವ ಖಾಯಿಲೆಯೆಂದು ಭಾವಿಸುತ್ತೇವೆಯೊ ಅದು ರೋಗವಲ್ಲ. ಅದು ಒಂದು ಅಭ್ಯಾಸ. ಆ ಅಭ್ಯಾಸ ಕಾರಣವಿಲ್ಲದೆ ಉಂಟಾಗುವುದಿಲ್ಲ.

ಯಾವುದೇ ಒಂದು ಪದಾರ್ಥವನ್ನು ಇಲ್ಲವೆ ವಿಚಾರ ಅಥವಾ ಕೆಲಸವನ್ನು ನಾವು ಏತಕ್ಕೆ ಮರೆತುಬಿಡುತ್ತೇವೆಂದರೆ ಮೊದಲನೆಯದಾಗಿ ನಾವು ಆ ವಸ್ತು, ವಿಚಾರ ಇಲ್ಲವೆ ಕೆಲಸವನ್ನು ನೆನಪಿನಲ್ಲಿಟ್ಟುಕೊಳ್ಳಲು ತುಂಬಾ ಇಷ್ಟಪಡುವುದಿಲ್ಲ. ಎರಡನೆಯದಾಗಿ ನಾವು ನಮ್ಮ ನೆನಪಿನ ಶಕ್ತಿಯನ್ನು ಸರಿಯಾದ ರೀತಿಯಲ್ಲಿ ದುಡಿಸಿಕೊಳ್ಳುವುದಿಲ್ಲ.

ಈಗ ಈ ಕಾರಣಗಳ ಹಿನ್ನೆಲೆಯಲ್ಲಿ ನಾವು ಮೇಲೆ ಹೇಳಿದ ಉದಾಹರಣೆ ಗಳನ್ನು ನೋಡೋಣ :

ಮಗನ ಬುದ್ಧಿ ಮತ್ತು ಸ್ಮರಣಶಕ್ತಿ ಚುರುಕಾಗುವಂತೆ ಅಪ್ಪ-ಅಮ್ಮ ಮಾಡಿದ ಎಲ್ಲ ಪ್ರಯತ್ನಗಳೂ ಆ ಹುಡುಗನ ಪಾಲಿಗೆ ನಿಷ್ಪ್ರಯೋಜಕವಾಗುತ್ತವೆ. ಅಂದಮಾತ್ರಕ್ಕೆ ಆ ಹುಡುಗ ಪೆದ್ದನೆಂದು ಹೇಳೋಣವೆ. ಖಂಡಿತ ಇಲ್ಲ. ಅವನಿಗೆ ಸಿನೆಮಾ ಹಾಡುಗಳು ಚೆನ್ನಾಗಿ ನೆನಪಿನಲ್ಲಿರುತ್ತವೆ. ಯಾವುದೇ ಸಿನೆಮಾದ ಸಂಭಾಷಣೆಯನ್ನು ಚಾಚೂ ತಪ್ಪದೆ ಅಭಿನಯದೊಡನೆ ಅವನು ನಿಮ್ಮ ಮುಂದೆ ಆಡಿ ತೋರಿಸಬಲ್ಲ. ಯಾವುದೇ ಸಿನೆಮಾ ತಾರೆಯ ಕಣ್ಣು ಅಥವಾ ತುಟಿಗಳನ್ನು ನೋಡಿಯೆ ಅವರನ್ನು ಗುರುತಿಸುವ ಸ್ಪರ್ಧೆಯಲ್ಲಿ ಅನಾಯಾಸವಾಗಿ ಗೆಲ್ಲಬಲ್ಲ. ಹೀಗೆ 'ಪೆದ್ದ'ನೆಂದು ಕರೆಸಿಕೊಂಡ ಹುಡುಗನೊಬ್ಬನ ಹತ್ತಿರ ಇಸ್ಪೀಟು ಆಡಿ ನಾನು ಅನೇಕಬಾರಿ ಸೋತಿದ್ದೇನೆ. ಅಷ್ಟು ಎಲೆಗಳ ವಿವರಗಳೆಲ್ಲವೂ ಅವನ ತಲೆಯಲ್ಲಿ ಅಚ್ಚೊತ್ತಿದ್ದವು. ಅಪ್ಪ-ಅಮ್ಮ ಕುಡಿಸಿದ ತಿನ್ನಿಸಿದ ಹಾಲು ತುಪ್ಪ ಖಂಡಿತವಾಗಿಯೂ ತನ್ನ ಕೆಲಸ ಮಾಡಿತ್ತು. ಅವನ ನೆನಪಿನ ಶಕ್ತಿ ಚುರುಕಾಗಿಯೆ ಕೆಲಸ ಮಾಡುತ್ತಿತ್ತು. ತನಗೆ ಯಾವುದು ನೆನಪಿನಲ್ಲಿರಬೇಕೆಂದು ಮನಸ್ಸು ತುಂಬ ಬಯಸುತ್ತಿತ್ತೊ ಅದೆಲ್ಲ ಅವನ ತಲೆಯಲ್ಲಿ ಕರಾರುವಾಕ್ಕಾಗಿ ಮುದ್ರೆಯೊತ್ತಿರು ತ್ತಿತ್ತು.

ಒಬ್ಬ ವಿಜ್ಞಾನಿ ಮದುವೆ ಮುಹೂರ್ತಕ್ಕೆ ಸರಿಯಾಗಿ ಚರ್ಚಿಗೆ ಹೋಗುವ ಬದಲಿಗೆ ಪ್ರಯೋಗಶಾಲೆಗೆ ಹೋಗಿ ಕುಳಿತನೆಂದರೆ ಅವನಿಗೆ ಮದುವೆಗಿಂತಲೂ

ಮದುವಣಗಿತ್ತಿಗಿಂತಲೂ ಪ್ರಯೋಗಶಾಲೆಯೇ ಹೆಚ್ಚು ಎಂಬುದು ಸ್ಪಷ್ಟವಾಗುತ್ತದೆ.

ನಮ್ಮ ತಾಯಿ ಮೊಮ್ಮಗನ ಹೆಸರು ಮರೆತುಬಿಡಬಹುದು. ಆದರೆ ತನ್ನ ಹಿರಿಯರ ಹಾಗೂ ಅಳಿದ ನೆಂಟರಿಷ್ಟರ ತಿಥಿದಿನಗಳನ್ನು ಚಾಚೂತಪ್ಪದೆ ನೆನಪಿನಲ್ಲಿಟ್ಟುಕೊಂಡಿರುತ್ತಾರೆ. ಆಕೆಗೆ ಇಂಗ್ಲಿಷ್ ತಾರೀಖು ನೆನಪಿನಲ್ಲಿರುತ್ತದೆಯೊ ಇಲ್ಲವೊ ಹೇಳಲಾರೆ. ಆದರೆ ಏಕಾದಶಿ, ಹುಣ್ಣಿಮೆ, ಸಂಕ್ರಾಂತಿ ಇಂಥವನ್ನು ಮಾತ್ರ ಮರೆಯಲಾರಳು.

ನನ್ನ ಗೆಳೆಯ ತನ್ನ ಅಪ್ಪ ಅಮ್ಮನಿಗೆ ಕಾಗದ ಬರೆಯುವುದನ್ನು ಮರೆತುಬಿಡುತ್ತಾನೆ. ಆದರೆ ತನ್ನ ನಲ್ಲೆಗೆ ಕಾಗದ ಹಾಕುವುದನ್ನು ಸ್ವಲ್ಪವೂ ತಡ ಮಾಡುವುದಿಲ್ಲ. ಕಾರಣ ಅದೇ—ಒಲವು ಮತ್ತು ಅಭಿರುಚಿ.

ಪದಾರ್ಥಗಳನ್ನು ಎಲ್ಲೋ ಇಟ್ಟು ಮರೆತುಬಿಡುವುದು ಏನನ್ನು ಸೂಚಿಸುತ್ತದೆಯೆಂದರೆ ಅವುಗಳನ್ನು ಎಲ್ಲಿ ಇಡಬೇಕೆಂಬುದನ್ನು ಮೊದಲೇ ನಿರ್ಧರಿಸಿಕೊಂಡಿರುವುದಿಲ್ಲ. ಬೀಗದ ಕೈ ಇಡುವ ಜಾಗ ಮೇಜಿನ ಡ್ರಾ ಒಳಗೆ ಎಂದು ನಮ್ಮ ಸ್ಮರಣಶಕ್ತಿ ನೆನಪಿನಲ್ಲಿಟ್ಟುಕೊಳ್ಳಬಹುದು. ಅಂದರೆ ಪ್ರತಿಸಾರಿಯೂ ಮೇಜಿನ ಡ್ರಾ ಒಳಗೇ ಅದನ್ನು ಇಟ್ಟರೆ ಖಂಡಿತ ಜ್ಞಾಪಕಕ್ಕೆ ಬರುತ್ತದೆ. ಆದರೆ ಒಮ್ಮೆ ಕೋಟಿನ ಜೋಬಿನಲ್ಲಿ ಇನ್ನೊಮ್ಮೆ ರೇಡಿಯೊ ಮೇಲೆ ಮತ್ತೊಮ್ಮೆ ಷೋಕೇಸಿನಲ್ಲಿ ಹೀಗೆ ಇಡುತ್ತಾಹೋದರೆ ಬೀಗದ ಕೈ ಈ ಬಾರಿ ಎಲ್ಲಿಟ್ಟಿದ್ದೇವೆಂಬುದು ಮರೆತುಹೋಗುತ್ತದೆ.

ಪ್ರಯಾಣಕ್ಕೆ ಹೊರಟ ಮಂದಿ ಅಗತ್ಯವಾದ ಸಾಮಾನುಗಳನ್ನು ಮರೆತುಬಿಡುವುದುಂಟು ಎಂದೆವಲ್ಲವೆ. ಅಂಥ ಜನ ಸಾಮಾನ್ಯವಾಗಿ ತಮ್ಮ ಜ್ಞಾಪಕ ಶಕ್ತಿ ತುಂಬ ಚುರುಕು ಎಂದು ಭಾವಿಸಿಕೊಂಡಿರುವವರು. ಹೊರಡುವ ಹೊತ್ತಿನಲ್ಲಿ ತಮ್ಮ ಅಗತ್ಯದ ಸಾಮಾನುಗಳನ್ನೆಲ್ಲ ಕ್ಷಣಾರ್ಧದಲ್ಲಿ ಜೋಡಿಸಿಕೊಳ್ಳಬಹುದು ಎಂದುಕೊಳ್ಳುವ ಅವರ ಮನಸ್ಸಿನಲ್ಲಿ ಕಡೇ ಗಳಿಗೆಯಲ್ಲಿ ಎಷ್ಟು ಗಡಿಬಿಡಿ ಮತ್ತು ಅವಸರ ಉಂಟಾಗುತ್ತದೆಂದರೆ ಎದುರಿಗಿರುವ ಸಾಮಾನುಗಳನ್ನು ತೆಗೆದುಕೊಂಡು ಉಳಿದೆಲ್ಲವನ್ನೂ ಮರೆತುಬಿಡುತ್ತಾರೆ ಈ ಭೂಪರು.

ಜನರ ಹೆಸರುಗಳನ್ನು ಮರೆತುಬಿಡುವ ಕ್ರಿಯೆ ಏನನ್ನು ಸೂಚಿಸುತ್ತದೆಂದರೆ ಹೀಗೆ ಮರೆಯುವ ಜನರ ಬಗ್ಗೆ ನಮ್ಮ ಮನಸ್ಸಿನಲ್ಲಿ ಹೆಚ್ಚು ಆಸಕ್ತಿ ಕುತೂಹಲ ಇರುವುದಿಲ್ಲ. ನಾವು ಕೊಡುವ ಇಂಥ ಮಾತುಗಳೂ ಹಾಗೆಯೆ. ಅವುಗಳನ್ನು ಈಡೇರಿಸುವ ಬಗೆಗೆ ನಮ್ಮ ಮನಸ್ಸಿನಲ್ಲಿ ಯಾವುದೇ ದೃಢಸಂಕಲ್ಪ ಇರುವುದಿಲ್ಲ.

ಆಹ್ವಾನ ಪಡೆದೂ ಸರಿಯಾದ ವೇಳೆಗೆ ಹೋಗಿ ತಲುಪದಿರುವುದಕ್ಕೆ ಕಾರಣ ಏನೆಂದರೆ ನಮ್ಮ ಒಳಮನಸ್ಸಿಗೆ ಹಾಗೆ ನಡೆದುಕೊಳ್ಳುವುದಕ್ಕೆ ತುಂಬಾ ಇಷ್ಟವಿರುವುದಿಲ್ಲ. ನಮಗೆ ಎಲ್ಲಿಗೆ ಹೋಗುವುದಕ್ಕೆ ಖಂಡಿತ ಇಷ್ಟವಿರುತ್ತದೆಯೊ ಅಲ್ಲಿಗೆ ಸಾಕಷ್ಟು ಮುಂಚಿತವಾಗಿಯೆ ಹೋಗಿ ತಲುಪಿರುತ್ತೇವೆ. ಅಂತೆಡೆಗಳಿಗೆ ಹೇಗೆ ಹೋಗಬೇಕೆಂದು ಅನೇಕ ದಿನಗಳಿಂದ ಲೆಕ್ಕಾಚಾರ ಹಾಕುತ್ತಿರುತ್ತೇವೆ.

ಕನಸು ನೆನಪಿನಲ್ಲಿ ಉಳಿಯದೆ ಹೋಗುವುದಕ್ಕೆ ಕಾರಣ ಸಹ ನಮ್ಮ ಮನಸ್ಸಿನ ಚೇತನ ಹಾಗೂ ಅಚೇತನಾವಸ್ಥೆಗೆ ಸಂಬಂಧಪಟ್ಟುದು. ನಾವು ಮಲಗಿದಾಗ ನಮ್ಮೊಡನೆ ಚೇತನ ಮನಸ್ಸು ಸಹ ಮಲಗುತ್ತದೆ. ಆಗ ಅಚೇತನ ಸ್ಥಿತಿ ಜಾಗೃತಗೊಂಡು ಅದರಲ್ಲಿ ಅಡಗಿರುವಷ್ಟೆ ವಿಚಾರಗಳು ಕನಸಿನಲ್ಲಿ ಕಾಣಿಸತೊಡಗುತ್ತವೆ. ಎದ್ದ ಮೇಲೆ ಅಚೇತನ ಮನಸ್ಸು ಹಿನ್ನೆಲೆಗೆ ಸರಿದು ಚೇತನ ಮನಸ್ಸು ಕೆಲಸ ಮಾಡಲು ಪ್ರಾರಂಭಿಸುತ್ತದೆ. ಒಂದು ನಿರ್ದಿಷ್ಟ ಅವಧಿಯಲ್ಲಿ ಚೇತನ ಮತ್ತು ಅಚೇತನ ಇವೆರಡರಲ್ಲಿ ಒಂದು ಮನಸ್ಸು ಮಾತ್ರ ಕ್ರಿಯಾಶೀಲವಾಗಿರುವುದರಿಂದ ನಾವು ಕನಸಿನಲ್ಲಿ ಎದ್ದಾಗಿನ ಮತ್ತು ಎದ್ದಾಗ ಕನಸಿನ ವಿಚಾರಗಳನ್ನು ಮರೆತುಬಿಡುತ್ತೇವೆ.

ತಾರೀಖು ಮರೆತುಬಿಡುವುದು ಇಲ್ಲವೆ ಮಾತನಾಡುತ್ತಿರುವಾಗ ಯಾವ ವಿಷಯವಾಗಿ ಮಾತನಾಡುತ್ತಿದ್ದೇವೆಂದು ಮರೆತುಬಿಡುವುದು ಮಿದುಳಿನ ಮೇಲೆ ಹೆಚ್ಚು ಒತ್ತಡ ಬೀಳುವುದರಿಂದ ಉಂಟಾಗುತ್ತದೆಯೆ ಹೊರತು ನೆನಪಿನ ಶಕ್ತಿ ಕಡಮೆಯಾಗುವುದರಿಂದಲ್ಲ.

ನೆನಪಿನ ಶಕ್ತಿ ನಮ್ಮ ಅಭಿರುಚಿ ಮತ್ತು ಆವಶ್ಯಕತೆಗಳೊಡನೆಯೂ ಸಂಬಂಧ ಪಡೆದಿದೆ. ನಾವು ಯಾವುದಾದರೂ ವಿಶಿಷ್ಟ ವಸ್ತುವಿನ ಬಗೆಗೆ ಉದಾಸೀನ ಮನಸ್ಸುಳ್ಳವರಾದಲ್ಲಿ ಅದನ್ನು ಮರೆತುಬಿಡುತ್ತೇವೆ. ರೋಗ ತೀರ ಉಲ್ಬಣಗೊಂಡಿದ್ದಾಗ ಸಕಾಲದಲ್ಲಿ ಔಷಧ ತೆಗೆದುಕೊಳ್ಳಲು ನೆನಪಿಟ್ಟುಕೊಳ್ಳುವ ನಾವು ಅದು ಗುಣಮುಖವಾಗುತ್ತಿರುವಂತೆಯೇ ಔಷಧ ತೆಗೆದುಕೊಳ್ಳಲು ಮರೆತುಬಿಡುತ್ತೇವೆ. ಅದು ಏಕೆಂದರೆ ರೋಗ ವಾಸಿಯಾಗಬೇಕೆಂಬ ಉತ್ಕಟ ಮನಸ್ಸಿನಿಂದ ಇಲ್ಲವೆ ಭಯಾತಂಕಗಳಿಂದ ಔಷಧ ತೆಗೆದುಕೊಳ್ಳಲು ಶುರುಮಾಡುವ ನಾವು ಅದು ಇಳಿಮುಖವಾಗುತ್ತಲೆ ಸುಮ್ಮನಾಗಿಬಿಡುತ್ತೇವೆ.

ಬದುಕಿನಲ್ಲಿ ಯಾವಾಗಲೂ ನಮ್ಮ ಅಭಿರುಚಿ ಮತ್ತು ಅಗತ್ಯಗಳಿಗೆ ತಕ್ಕ ಕೆಲಸಗಳನ್ನೇ ಮಾಡುತ್ತಾ ಹೋಗಲಾಗುವುದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಸೂಕ್ತವಾಗಿ ನೆನಪಿಟ್ಟುಕೊಳ್ಳುವ ಪ್ರಸಂಗಗಳು ಬಂದಾಗ ಒಬ್ಬ ಸಹಾಯಕನ ಅಗತ್ಯ

ಉಂಟಾಗುತ್ತದೆ. ನನ್ನ ಬಳಿ ಅಂಥ ಒಂದು ಸಹಾಯಕ ಉಂಟು. ಅದೇ ನನ್ನ ನೋಟ್ ಬುಕ್.

ಹಿಂದಿನ ಕಾಲದಲ್ಲಿ ಕರವಸ್ತ್ರಕ್ಕೆ ಗಂಟುಗಳನ್ನು ಕಟ್ಟಿ ನೋಟ್ ಬುಕ್ ಅಥವಾ ದಿನಚರಿಯಿಂದ ನಾವು ಇಂದು ಮಾಡುವ ಕೆಲಸವನ್ನು ನಿರ್ವಹಿಸುತ್ತಿದ್ದರು. ಆ ಗಂಟು ಯಾವುದಾದರೂ ಒಂದು ನೆನಪನ್ನು ಪ್ರತಿನಿಧಿಸುತ್ತಿತ್ತು ಮತ್ತು ಅದರ ನೆರವಿನಿಂದ ನಾವು ಇಡೀ ಘಟನೆಯ ಚಿತ್ರವನ್ನು ನೆನಪಿಸಿಕೊಳ್ಳುವುದು ಸಾಧ್ಯವಾಗುತ್ತಿತ್ತು. ಈಗಲೂ ಒಂದೆರಡು ಕೆಲಸಗಳನ್ನು ನೆನಪಿನಲ್ಲಿಟ್ಟುಕೊಳ್ಳುವ ಮಂದಿಗೆ ದಿನಚರಿ ಎಷ್ಟು ಪ್ರಮುಖವೊ ಗಂಟು ಸಹ ಅಷ್ಟೇ ಪ್ರಮುಖವೆನಿಸುತ್ತದೆ.

ನನ್ನ ಗೆಳೆಯರೊಬ್ಬರು ದಿನಚರಿ ಇಡುತ್ತಾರೆ. ಅವರು ನನಗಾಗಿ ಒಂದು ಪುಸ್ತಕ ತಂದುಕೊಡುತ್ತೇನೆಂದು ಮಾತುಕೊಟ್ಟರು. ಈ ವಿಚಾರವನ್ನು ಅವರು ತಮ್ಮ ದಿನಚರಿಯಲ್ಲೂ ಗುರುತುಹಾಕಿಕೊಂಡರು. ಇನ್ನೊಂದು ದಿನ ನನ್ನನ್ನು ಭೇಟಿಯಾದಾಗ ಅವರು ಅಂದರು, 'ಛೆಛೆ, ನಾನು ಡೈರಿಯಲ್ಲಿ ಗುರುತು ಮಾಡಿಕೊಂಡಿದ್ದೆ. ಆದರೆ ಅದನ್ನು ತೆಗೆದುನೋಡಲು ಬಿಡುವೇ ಆಗಲಿಲ್ಲ.'

ಇದರಿಂದ ಒಂದು ವಿಚಾರ ಸ್ಪಷ್ಟವಾಗುತ್ತದೆ. ಏನೆಂದರೆ ಕೇವಲ ಗುರುತು ಹಾಕಿಕೊಳ್ಳುವ ಸಲುವಾಗಿ ತೆಗೆಯುವ ದಿನಚರಿ ಪುಸ್ತಕದಿಂದ ಅಥವಾ ನೋಟ್ ಬುಕ್ಕಿನಿಂದ ಯಾವ ಪ್ರಯೋಜನವೂ ಇಲ್ಲ.

ನೆನಪಿನಲ್ಲಿಟ್ಟುಕೊಳ್ಳಬೇಕಾದ ಅಂಶಗಳನ್ನು ನೋಟ್ ಬುಕ್‌ನಲ್ಲಿ ಬರೆದಿಟ್ಟುಕೊಳ್ಳುವುದಕ್ಕೂ ಕೆಲವು ಸೀಮಿಂತಗಳು ಇರುತ್ತವೆ. ಉದಾಹರಣೆಗೆ ನೀವು ಕಚೇರಿಗೆ ಸೈಕಲ್ ಮೇಲೆ ಹೋಗುತ್ತೀರಿ ಎಂದಿಟ್ಟುಕೊಳ್ಳಿ. ಅಲ್ಲಿಗೆ ಈ ಕೆಳಗಿನ ಪದಾರ್ಥಗಳನ್ನು ನೀವು ಕೊಂಡೊಯ್ಯಬೇಕಾಗಿರುತ್ತದೆ--

೧. ಕರವಸ್ತ್ರ, ಬಹುಶಃ ಅದು ಮನೆಯಲ್ಲಿ ಹಗ್ಗದ ಮೇಲೆ ಇನ್ನೂ ಒಣಗುತ್ತಿರುತ್ತದೆ
೨. ಕಚೇರಿ-ಮೇಜಿನ ಡ್ರಾಯರ್ ಬೀಗದ ಕೈ
೩. ಪೆನ್ನು
೪. ಗಡಿಯಾರ
೫. ನೀವು ನೋಡಲು ಮನೆಗೆ ತಂದಿದ್ದ ಕಚೇರಿ ಫೈಲು
೬. ಕಚೇರಿಗೆ ಹೋಗುತ್ತಾ ದಾರಿಯಲ್ಲಿ ಅಂಚೆ ಪೆಟ್ಟಿಗೆಗೆ ಹಾಕಲು ಮಡದಿ ಕೊಟ್ಟ ಕಾಗದ

೭. ಕಚೇರಿಗೆ ಹೋಗಿ ಮಾಡಬೇಕಾದ ಕೆಲವು ಫೋನ್ ಕರೆಗಳು
೮. ಕಚೇರಿಯಿಂದ ಮನೆಗೆ ಹಿಂದಿರುಗಬೇಕಾದರೆ ಮಾಡಬೇಕಾದ ಒಂದೆರಡು ಸ್ವಂತ ಕೆಲಸಗಳು

ಇವೆಲ್ಲವನ್ನು ನೀವು ನೆನಪಿನ ಪುಸ್ತಕದಲ್ಲಿ ಅಥವಾ ನೋಟ್ ಬುಕ್‌ನಲ್ಲಿ ಬರೆದುಕೊಳ್ಳುವಿರಾ ? ಇಲ್ಲ, ಇವೆಲ್ಲ ನೋಟ್‌ಬುಕ್ಕಿನಲ್ಲಿ ಬರೆದಿಡಬೇಕಾದ ಸಂಗತಿಗಳಲ್ಲ.

ನಿಮಗೆ ಆಶ್ಚರ್ಯವೆನಿಸಬಹುದು, ಇಂಥ ಸಂದರ್ಭದಲ್ಲಿ ನಾನು ಹೀಗೆ ಮಾಡುತ್ತೇನೆ—

ಮೊದಲು ಯಾವ ಪದಾರ್ಥವಿಲ್ಲದೆ ಕಚೇರಿಗೆ ಹೋಗಲು ಅಸಾಧ್ಯ ಎಂದು ಯೋಚಿಸುತ್ತೇನೆ. ಖಂಡಿತವಾಗಿಯೂ ಇಂಥ ಒಂದು ಪದಾರ್ಥ—ಸೈಕಲ್ಲು. ಆಗ ಸೈಕಲ್ಲಿನ ಜೊತೆಯಲ್ಲಿಯೆ ಉಳಿದ ಕೆಲಸಗಳನ್ನು ಮಾಡಲು ಪ್ರಯತ್ನಿಸುತ್ತೇನೆ. ಕರ್ಚೀಫನ್ನು ಸೈಕಲ್ಲಿನ ಹ್ಯಾಂಡಲ್ ಮೇಲೆ ಒಣಗಲು ಹಾಕುತ್ತೇನೆ. ಫೈಲನ್ನು ಕ್ಯಾರಿಯರ್‌ಗೆ ಸಿಕ್ಕಿಸಿ ಅದರ ಮೇಲೆ ಹೆಂಡತಿ ಕೊಟ್ಟ ಕಾಗದ ಇಟ್ಟುಕೊಳ್ಳುತ್ತೇನೆ. ಅದರ ಜೊತೆಯಲ್ಲಿ ಒಂದು ಚೀಟಿ ಇಟ್ಟು ಚೀಟಿಯ ಮೇಲೆ ಕಚೇರಿಯಿಂದ ಹಿಂದಿರುಗಬೇಕಾದರೆ ಮಾಡಬೇಕಾಗಿರುವ ಒಂದೆರಡು ಕೆಲಸಗಳು, ಫೋನ್ ನಂಬರುಗಳು ಈ ವಿವರಗಳನ್ನು ಸಂಕೇತರೂಪದಲ್ಲಿ ಬರೆದಿಡುತ್ತೇನೆ. ಕಚೇರಿ ಮೇಜಿನ ಡ್ರಾ ಬೀಗದ ಕೈ, ಪೆನ್ ಹಾಗೂ ಗಡಿಯಾರಗಳನ್ನು ಕಚೇರಿಗೆ ಹೋಗಬೇಕಾದರೆ ಹಾಕಿಕೊಳ್ಳುವ ಕೋಟಿನಲ್ಲಿ ಮೊದಲೇ ಹಾಕುತ್ತೇನೆ. ಇಲ್ಲವೆಂದರೆ ಇನ್ನಾವುದಾದರೂ ಗೊತ್ತಾದ ಜಾಗದಲ್ಲಿ ಇಡುತ್ತೇನೆ. ಹೀಗೆ ಎಲ್ಲ ವಿಚಾರಗಳೂ ಒಂದರೊಡನೆ ಒಂದು ಹೆಣೆದುಕೊಂಡಂತಾಗಿ ನೆನಪಿನಲ್ಲಿ ಉಳಿಯುತ್ತವೆ.

ಈ ಪದ್ಧತಿಯನ್ನು ನಾನು ಸ್ಮರಣಶಕ್ತಿಯ 'ವ್ಯವಸ್ಥೆ' ಎಂದು ಕರೆಯುತ್ತೇನೆ.

ನಾನು ಮೇಲೆ ಹೇಳಿದ ವ್ಯವಸ್ಥೆ ನಿಮಗೆ ಅಷ್ಟಾಗಿ ಹಿಡಿಸದೆ ಹೋಗಿರಲೂ ಸಾಕು. ಹಾಗಾದರೆ ಇಲ್ಲಿ ನೋಡಿ, ನಿಮ್ಮ ಸಂತೋಷಕ್ಕಾಗಿ ಈ ಚಿತ್ರದ ಇನ್ನೊಂದು ಮುಖವನ್ನು ನಿಮ್ಮ ಮುಂದಿಡುತ್ತೇನೆ. ಇಂಥ ಸಮಸೆ ಗಳಿಗೆ ಹಲವಾರು ಮುಖಗಳು.

ಸ್ನಾನಮಾಡಬೇಕಾದರೆ ಗಡಿಯಾರವನ್ನು ಬಚ್ಚಲು ಮನೆಯಲ್ಲಿ ತೆಗೆದಿಟ್ಟು ಹಾಗೆಯೆ ಬಂದುಬಿಡುವುದು, ಬರೆಯುತ್ತಾ ಬರೆಯುತ್ತಾ ಪೆನ್ನನ್ನು ಚಾಪೆಯ

ಮಂಗ್ಗುಲಲ್ಲಿ ಇಟ್ಟುಬಿಡುವುದು. ಹೆಂಡತಿ ಏನಾದರೂ ಚೀಟಿಯನ್ನೊ ಅಂಚೆಗೆ ಹಾಕಲು ಕಾರ್ಡನ್ನೊ ಕೊಟ್ಟರೆ ಅದನ್ನು ಮೇಜಿನ ಮೇಲಿಡು,ನಾಳೆ ಹೋಗುತ್ತಾ ತೆಗೆದುಕೊಂಡು ಹೋಗುತ್ತೇನೆ ಎನ್ನುವುದು. ಸಂಜೆ ಮನೆಗೆ ಬಂದ ಮೇಲೆ ಅಂಗಿ ಬಿಚ್ಚಬೇಕಾದರೆ ಕಚೇರಿಯ ಮೇಜಿನ ಬೀಗದ ಕೈಯನ್ನು ತೆಗೆದು ಯಾವುದೋ ಗೂಡಿನಲ್ಲಿಟ್ಟುಬಿಡುವುದು—ಇಂಥ ಅನೇಕ ಕೆಲಸಗಳನ್ನು ನಾವು ಮಾಡುತ್ತಲೆ ಇರುತ್ತೇವಲ್ಲವೆ ? ಮಡದಿ ಹೇಳಿದ ಕೆಲವಾರು ಕೆಲಸಗಳನ್ನು ಕಚೇರಿಗೆ ಹೋದ ಮೇಲೆ ನೋಡೋಣ ಅಂದುಕೊಳ್ಳುವುದು, ಹಗ್ಗದ ಮೇಲೆ ಒಣಗುತ್ತಿರುವ ಕರ ವಸ್ತ್ರವನ್ನು ಕಚೇರಿಗೆ ಹೋಗಬೇಕಾದರೆ ತೆಗೆದಿಟ್ಟುಕೊಳ್ಳೋಣ ಅಂದುಕೊಳ್ಳು ವುದು—ಒಂದೇ ಎರಡೇ ಇಂಥ ಅವಾಂತರಗಳು ! ಆದರೆ ಹೀಗೆಲ್ಲ ಅಂದುಕೊಳ್ಳು ವುದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಮನೆಯಿಂದ ಹೊರಡಬೇಕಾದರೆ ನಾವು ಅಂದುಕೊಂಡಂತೆ ಎಲ್ಲವನ್ನೂ ಜೋಡಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಸಮಯಕ್ಕೆ ಸರಿಯಾಗಿ ಏನಾದರೂ ಬೇಕಾದ ಪದಾರ್ಥ ಕೈಗೆ ಸಿಕ್ಕದೆ ಹೋದರೆ ಹಾಳು ನೆನಪು ಕೈ ಕೊಟ್ಟಿತು ಅಂತ ಪೇಚಾಡುತ್ತೇವೆ.

ಹೀಗೆಲ್ಲ ಆಗುವುದನ್ನು ತಪ್ಪಿಸಬೇಕಾದರೆ ಮೇಲೆ ಹೇಳಿದಂತಹ ಒಂದು ಏರ್ಪಾಟನ್ನು ಮಾಡಿಕೊಳ್ಳುವುದು ಅಗತ್ಯ ಎಂಬುದು ಸ್ಪಷ್ಟವಾಗುತ್ತದಲ್ಲವೆ. ಹೆಚ್ಚು ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ಇದರಿಂದ ಸಾಧ್ಯವಾಗು ತ್ತದೆ.

ಕಡೆಯದಾಗಿ ಈ ಲೇಖನದ ಸಾರಾಂಶವನ್ನು ಒಟ್ಟಾರೆಯಾಗಿ ಹೀಗೆ ಹೇಳ ಬಹುದು—

ನಮ್ಮ ಮನಸ್ಸಿನಲ್ಲಿ ತೀವ್ರವಾಗಿ ನೆನಪಿಟ್ಟುಕೊಳ್ಳಲೇಬೇಕು ಎಂಬಂತಿರುವ ಅಂಶಗಳನ್ನು ಮಾತ್ರ ನಾವು ನೆನಪಿನಲ್ಲಿ ಇಟ್ಟುಕೊಳ್ಳಬಲ್ಲೆವು.

ಯಾವುದಾದರೂ ಸಂದರ್ಭದಲ್ಲಿ ನಾವು ಏನನ್ನಾದರೂ ಇದ್ದಕ್ಕಿದ್ದಂತೆ ಮರೆತುಬಿಟ್ಟಾಗ ನಮ್ಮ ನೆನಪಿನ ಶಕ್ತಿಯ ಕಡಮೆಯಾಗುತ್ತಿದೆಯೆಂದು ಭಯ ಪಡಬೇಕಾಗಿಲ್ಲ. ಅದಕ್ಕೆ ಬದಲಾಗಿ ಅದರ ಮೇಲೆ ಒತ್ತಡ ಜಾಸ್ತಿಯಾಗಿದೆ, ಹಾಗಾಗಿ ಅದಕ್ಕೆ ನೆರವಿನ ಅಗತ್ಯ ಇದೆ ಎಂದು ಭಾವಿಸುವುದು ಒಳ್ಳೆಯದು.

ನಮ್ಮ ನೆನಪಿನ ಶಕ್ತಿ ಅಗತ್ಯಕ್ಕಿಂತ ಹೆಚ್ಚು ಮೊನಚಾಗಿದೆ ಎಂದು ತಿಳಿ ಯುವ ಅಗತ್ಯವಿಲ್ಲ. ಗುರುತುಹಾಕಿಕೊಳ್ಳುವಂಥ ಕೆಲಸಗಳ ಬಗೆಗೆ ಗುರುತು ಹಾಕಿಕೊಳ್ಳುವುದು ಒಳ್ಳೆಯದು, ಉಳಿದ ಸಣ್ಣಪುಟ್ಟ ಕೆಲಸಗಳನ್ನು ಒಂದು ಕ್ರಮದಲ್ಲಿ ಬೇರೊಂದು ಅನಿವಾರ್ಯವಾದ ಕೆಲಸದ ಜೊತೆಯಲ್ಲಿ ಕೂಡಿಸಿಟ್ಟು ಕೊಳ್ಳಬೇಕು.

ಮತ್ತೆಮತ್ತೆ ಮರೆಯುವುದಕ್ಕೆ ನೀವು ಹೊಣೆಗಾರರಲ್ಲ, ನಿಮ್ಮ ಮಿದುಳು ತುಂಬ 'ಬಿಜಿ'ಯಾಗಿದೆ ಅಂತ ಭಾವಿಸಿಕೊಳ್ಳಿ.

ಇನ್ನೊಂದು ಮಾತು.

ಯಾವುದಾದರೂ ವಿಚಾರ ಸರಿಯಾದ ವೇಳೆಗೆ ಮರೆತುಹೋದಲ್ಲಿ, ಅದನ್ನು ಮತ್ತೆ ನೆನಪಿಸಿಕೊಳ್ಳುವ ವ್ಯರ್ಥ ಪ್ರಯತ್ನವನ್ನು ಮಾಡದಿರಿ. ಆ ಕ್ಷಣ ಅದು ಮರೆತುಹೋಗಲಿ ಬಿಡಿ, ನೂರಕ್ಕೆ ತೊಂಬತ್ತೊಂಬತ್ತು ಸಂದರ್ಭಗಳಲ್ಲಿ ಮರೆತು ಹೋದ ವಿಚಾರ ಥಟ್ಟನೆ ಮಿಂಚಿನಂತೆ ನೆನಪಿನಲ್ಲಿ ಮೂಡುವುದುಂಟು. ಅದನ್ನು ಆ ಕ್ಷಣದಲ್ಲಿ ಗುರುತು ಮಾಡಿಕೊಂಡು ನಿಮ್ಮ ಜಾಣತನ ತೋರಿಸಿ !

ಲಾಗದು. ವಾಸ್ತವವಾಗಿ ಒಂದೇ ಪರಿಸ್ಥಿತಿಯಲ್ಲಿರುವ ಸಮಾನಮನಸ್ಕರಾದ ವ್ಯಕ್ತಿಗಳ ನಡುವೆ ಖಾಯಂ ಆಗಿ ಉಂಟಾಗುವ ಸಂಬಂಧ 'ಗೆಳೆತನ' ಎಂದೆನಿಸಿಕೊಳ್ಳುತ್ತದೆ. ಇಂಥ ಗೆಳೆತನದಲ್ಲಿ ಒಂದೇ ಬಗೆಯ ಸ್ವಾರ್ಥತೆ ಮನೆಮಾಡಿರುತ್ತದೆ.

ಇಲ್ಲಿ 'ಸ್ವಾರ್ಥತೆ' ಎಂಬ ಪದದ ಪ್ರಯೋಗ ನಿಮ್ಮನ್ನು ಅಚ್ಚರಿಗೊಳಿಸಿರಲೂ ಸಾಧ್ಯ. ಆದರೆ ನಾನು ಈ ಪದವನ್ನು ಇಲ್ಲಿ ತುಂಬ ವಿಶಾಲವಾದ ಅರ್ಥದಲ್ಲಿ ಬಳಸುತ್ತಿದ್ದೇನೆ. ಈ ಪದದಲ್ಲಿ ನನ್ನ ಆಶಯ ಕೊಡುವಿಕೆ–ಕೊಳ್ಳುವಿಕೆಗಳಿಗೆ ಸಂಬಂಧಪಟ್ಟಂತೆ ಇದೆಯಷ್ಟೆ. ಈ ಕೊಡು–ಕೊಳ್ಳುವಿಕೆ ಕೇವಲ ಮಾತಿನದಾಗಬಹುದು, ಬಳುವಳಿಗಳದಾಗಬಹುದು, ಹೋಗಿಬರುವುದರದ್ದಾಗಬಹುದು. ಕೊಡು-ಕೊಳ್ಳುವಿಕೆ ಯಾವುದರಲ್ಲೇ ಆಗಲಿ, ಇಬ್ಬರಿಂದಲೂ ಒಂದೇ ಬಗೆಯಲ್ಲಿ ನಡೆಯಬೇಕು. ಒಂದುವೇಳೆ ಗೆಳೆತನವನ್ನು ಕೇವಲ ಪರಸ್ಪರ ಮಾತಾಡುವ ಉದ್ದೇಶದಿಂದಲೆ ಮಾಡಿಕೊಂಡಿದ್ದರೆ ಅಂಥವರಿಬ್ಬರೂ ಈ ದೃಷ್ಟಿಯಲ್ಲಿ ಸಮಸ್ವಾರ್ಥಿಗಳು.

ಈ ವಿಶಾಲವಾದ ಪ್ರಪಂಚದಲ್ಲಿ ಒಂದೇ ಬಗೆಯ ಅಭ್ಯಾಸವುಳ್ಳ, ವಿಚಾರ ಮಾಡುವ ಜನರನ್ನು ಹತ್ತಿರ ತರುವುದೇ ಈ ಪರಿಸ್ಥಿತಿಗಳ ಹಾಗೂ ಸ್ವಾರ್ಥ ಭಾವನೆಯ ಉದ್ದೇಶ. ತಮ್ಮ ತಮ್ಮ ಗಂಡಂದಿರಿಂದ ಉಪೇಕ್ಷೆಗೊಳಗಾದ ಇಬ್ಬರು ಗೃಹಿಣಿಯರು, ಆಸ್ಪತ್ರೆಯ ಒಂದೇ ವಾರ್ಡಿನ ಇಬ್ಬರು ರೋಗಿಗಳು, ಹರಯದ ಹುಡುಗರ ನಡೆವಳಿಕೆಯಿಂದ ಬೇಸರಗೊಂಡ ಇಬ್ಬರು ಮುದುಕರು, ಸಮಾಜದ ತಿರಸ್ಕಾರಕ್ಕೊಳಗಾದ ಇಬ್ಬರು ಕುಡುಕರು, ಜೊತೆಯಲ್ಲಿ ಪ್ರಯಾಣ ಮಾಡುವವರು, ಶುಭಸಮಾರಂಭವೊಂದರಲ್ಲಿ ಒಟ್ಟುಗೂಡುವ ಇಬ್ಬರು ಆಹ್ವಾನಿತರು, ಆಗತ್ಯಬಿದ್ದಾಗ ಪರಸ್ಪರ ಸಾಲ ಕೊಡುವ ಹಾಗೂ ತೆಗೆದುಕೊಳ್ಳುವ ಇಬ್ಬರು ವ್ಯಕ್ತಿಗಳು, ಒಬ್ಬರು ಇನ್ನೊಬ್ಬರ ಗೈರುಹಾಜರಿಯಲ್ಲಿ ನಿಗಾ ಇಡುವ ರಸ್ತೆ ಮಾರಾಟಗಾರರು, ಮಾಲೀಕನಿಂದ ಅಥವಾ ಮೇಲಧಿಕಾರಿಯಿಂದ ಬೈಗುಳ ತಿನ್ನುವ ಇಬ್ಬರು ಕೆಲಸಗಾರರು, ಮನೆಯವರ ತಿರಸ್ಕಾರಕ್ಕೆ ಒಳಗಾದ ಇಬ್ಬರು ಎಳೆಯರು, ಲೈಂಗಿಕ ವಿಷಯದ ಚರ್ಚೆಯಿಂದ ಖುಷಿಪಡುವ ಇಬ್ಬರು ಹರಯದ ಹುಡುಗರು—ಇಂಥವರೆಲ್ಲ ಒಂದೇ ಪರಿಸ್ಥಿತಿಯನ್ನು ಹಂಚಿಕೊಳ್ಳುವ ಕಾರಣದಿಂದಾಗಿ ಸಮಸ್ವಾರ್ಥಿಗಳು ಎಂದು ಕರೆಸಿಕೊಳ್ಳುತ್ತಾರೆ. ಇಂಥವರು ಪರಸ್ಪರ ಗೆಳೆಯರಾಗಲು ತಕ್ಕಂಥವರು. ಆದರೆ ಅವರು ಒಳ್ಳೆಯ ಸ್ನೇಹಿತರಾಗುತ್ತಾರೊ ಇಲ್ಲವೊ ಎಂಬುದು ಅವರ ನಡುವೆ ಇರುವ ಆಕರ್ಷಣೆ, ಒಬ್ಬರು ಇನ್ನೊಬ್ಬರಿ

ಗಿ ಮಾಡಬಹುದಾದಂತಹ ತ್ಯಾಗ ಇವುಗಳನ್ನು ಅವಲಂಬಿಸಿರುತ್ತದೆ. ಒಟ್ಟಿ ಲ್ಲಿ ಹೇಳುವುದಾದರೆ ಗೆಳೆತನ ಪ್ರಾರಂಭವಾಗಲು ಪರಿಚಯ ಆವಶ್ಯಕ, ಅಂದ ಮಾತ್ರಕ್ಕೆ ಪರಿಚಿತರೆಲ್ಲ 'ಗೆಳೆಯ' ರಾಗುವ ಅಗತ್ಯವೇನೂ ಇರುವುದಿಲ್ಲ.

## ೩) ಗೆಳೆತನ ಹೇಗೆ ಬೆಸೆದುಕೊಳ್ಳುತ್ತದೆ ?

'ನನ್ನ ಜೊತೆ ಯಾರೂ ಗೆಳೆತನ ಬಯಸುವುದಿಲ್ಲ' ಎಂಬುದು ಕೆಲವರ ೂರಾಗಿರಲು ಸಾಧ್ಯ. ಯಾರೂ ತಮ್ಮೆಡೆಗೆ ಸ್ನೇಹಹಸ್ತವನ್ನು ಚಾಚುವುದಿಲ್ಲ ಬುದು ಅವರ ಕೊರಗು. ಇದಕ್ಕೆ ಕಾರಣ ಏನು ಎಂಬುದನ್ನು ತಿಳಿದು ಳ್ಳಲು ಅವರ ಮನಸ್ಸಿಗೆ ಇಷ್ಟವಾಗುತ್ತದೆ.

ಇದಕ್ಕೆ ಕಾರಣವನ್ನು ತಿಳಿದುಕೊಳ್ಳುವ ಸುಲಭವಾದ ಉಪಾಯವೆಂದರೆ ವರು ತಾವು ಎಂಥ ಜನರ ಕಡೆಗೆ ಆಕರ್ಷಿತರಾಗುತ್ತಾರೆ ಎಂಬ ಬಗ್ಗೆ ತಾವೇ ಚಾರಮಾಡಿಕೊಳ್ಳಬೇಕು. ಸಾಧಾರಣವಾಗಿ ಇಂಥ ವ್ಯಕ್ತಿಯ ಕಡೆ ಸ್ನೇಹಕ್ಕಾಗಿ ವು ಸಹಜವಾಗಿ ಒಲಿಯುವ ಸಾಧ್ಯತೆಯಿರುತ್ತದೆ. ಆ ವ್ಯಕ್ತಿ :

—ಗಮನವಿಟ್ಟು ನಮ್ಮ ಮಾತನ್ನು ಕೇಳುವಂತಹವನಾಗಿರಬೇಕು ಹಾಗೂ ಮಗೂ ಮಾತನಾಡಲು ಸಂಪೂರ್ಣ ಅವಕಾಶವನ್ನು ನೀಡುವಂತಹವನಾಗಿರ ೕಕು.

—ತನ್ನ ಸ್ವಂತ ಅಭಿಪ್ರಾಯಗಳು ಹೇಗೇ ಇರಲಿ, ಅವುಗಳನ್ನು ನಮ್ಮ ೕಲೆ ಹೇರುವಂತಹವನಾಗಿರಬಾರದು.

—ನಗೆಮುಖದವನಾಗಿರಬೇಕು, ಆದರೆ ನಮ್ಮನ್ನು ನಗೆಪಾಟಲಿಗೆ ಗುರಿ ಾಡುವಂತಹವನಾಗಿರಬಾರದು.

—ಪ್ರತಿಯೊಂದು ಸಂದರ್ಭದಲ್ಲಿಯೂ ನಮ್ಮನ್ನು ತಿದ್ದುವ ಗುತ್ತಿಗೆ ೂತ್ತಿರುವವನಾಗಿರಬಾರದು.

ಈ ರೀತಿಯ ಗುಣಗಳನ್ನು ಹೊಂದಿರುವ ವ್ಯಕ್ತಿಯೊಡನೆ ಸ್ನೇಹ ಸಂಬಂಧ ನ್ನು ಬೆಳೆಸಲು ನಾವು ಹಾತೊರೆಯುವುದು ಸಹಜವೆ. ಅಂತೆಯೆ ಬೇರೆಯವ ನ್ನು ನಮ್ಮ ಕಡೆಗೆ ಆಕರ್ಷಿಸಲು ನಾವು ಸಹ ಈ ಗುಣಗಳನ್ನು ಮೈಗೂಡಿಸಿ ೂಳ್ಳಬೇಕು. ಇಂಥ ಸ್ವಭಾವವನ್ನು ರೂಢಿಸಿಕೊಂಡು ಹೊಸಹೊಸ ಪರಿಚಯ ಳನ್ನು ಮಾಡಿಕೊಳ್ಳಲು ಪ್ರಯತ್ನಿಸಬೇಕು.

ಪರಿಚಯ ಮಾಡಿಕೊಳ್ಳಬೇಕಾದರೆ ಸಾಮಾಜಿಕವಾಗಿ ಒಟ್ಟು ಸೇರುವುದು ುಬ ಆವಶ್ಯಕ. ಒಬ್ಬ ವ್ಯಕ್ತಿ ಸ್ಕೂಲು ಕಾಲೇಜುಗಳಲ್ಲಿ ಓದಿರದೆ ಇದ್ದರೆ,

ಸ್ನೇಹಾಕಾಂಕ್ಷಿ ಮಧ್ಯವಯಸ್ಸಿಗೆ ಬರುತ್ತಿದ್ದಂತೆಯೆ ಇನ್ನೊಂದು ರೂಪದಲ್ಲಿ ಹರಿಯತೊಡಗುತ್ತದೆ. ಇದ್ದಕ್ಕಿದ್ದಂತೆ ಕೆಲವು ವ್ಯಕ್ತಿಗಳ ಮೇಲೆ ಅಪಾರವಾಗಿ ಸ್ನೇಹದ ಮಳೆ ಕರೆಯುವ ಜನರನ್ನು ನೀವು ನೋಡಿರಬಹುದು. ಇಂಥವರು ಅಧಿಕಾರದಲ್ಲಿದ್ದರೆ ಯಜಮಾನನಾದರೂ ಒಬ್ಬ ಕೆಲಸಗಾರನ ಬಗೆಗೆ ಅಗತ್ಯಕ್ಕಿಂತ ಹೆಚ್ಚು ಕರುಣೆ ವಿಶ್ವಾಸಗಳನ್ನು ತೋರಬಹುದು. ಎರಡು ಒಳ್ಳೆಯ ಮಾತಾಡಿದರೂ ಖುಷಿಯಲ್ಲಿ ಹೇಳಿಕೊಳ್ಳಬಹುದು, ಗೆಳೆಯರಿಗಾಗಿ ಹುಡುಕಿ ಸಿಗದೆ ಹತಾಶ ರಾಗಿರುವವರು [illegible] ಅಂದಿನಿಂದ ಸಂಚಯಿಸಿಕೊಂಡಿದ್ದ ಸ್ನೇಹಧಾರೆಯ ನ್ನೆಲ್ಲ ಪಾತ್ರರಾದ ಯಾರಿಗಾದರೂ ಹರಿಸಲು ಇವರು ಕಾತರರಾಗಿರುತ್ತಾರೆ. ಒಂದು ವೇಳೆ ಯಾರೂ ಸಿಗದಿದ್ದಲ್ಲಿ, ನಾಯಿಬೆಕ್ಕುಗಳನ್ನಾದರೂ ಸಾಕಿ ಅವು ಗಳ ಸೇವೆಯಲ್ಲೇ ಸಂತೃಪ್ತರಾಗುತ್ತಾರೆ.

ಸ್ನೇಹದ ಹಿರಿಮೆಯನ್ನು ಯಾರು ಎಷ್ಟೇ ಅಲ್ಲಗಳೆಯಲಿ, ಗೆಳೆಯರ ಆವಶ್ಯಕತೆಯಂತೂ ಪ್ರತಿಯೊಬ್ಬರಿಗೂ ಉಂಟು. ಆದ್ದರಿಂದ ಗೆಳೆತನಕ್ಕೆ ಸಂಬಂಧಪಟ್ಟ ಕೆಲವು ಮುಖಗಳನ್ನು ಕುರಿತು ವಿಚಾರ ಮಾಡುವುದು ಅಗತ್ಯ ಎನಿಸುತ್ತದೆ.

(ಅ) ಗೆಳೆತನ ಏಕೆ ಬೇಕು ?
(ಆ) ಸ್ನೇಹ ನಮ್ಮನ್ನು ಯಾವಾಗ ನಿರಾಶೆಗೊಳಿಸುತ್ತದೆ ?
(ಇ) ಸ್ನೇಹ ಉಂಟಾಗುವುದು ಹೇಗೆ ?
(ಈ) ಸ್ನೇಹ ಒಡೆಯುವುದು ಹೇಗೆ ?

## (ಅ) ಗೆಳೆತನ ಏಕೆ ಬೇಕು ?

ಮನುಷ್ಯ ಒಂದು ಸಾಮಾಜಿಕ ಪ್ರಾಣಿ. ಸಮಾಜದಲ್ಲಿರುವ ಪ್ರತಿಯೊಬ್ಬ ಮನುಷ್ಯನಿಗೂ ಒಬ್ಬರಲ್ಲ ಒಬ್ಬರ ಒಡನಾಟ ಇರಲೇಬೇಕು—ಶಾಲೆಗಳಲ್ಲಿ ಸಹ ಪಾಠಿಗಳ ಸಹವಾಸ, ಮನೆಯಲ್ಲಿ ನೆರೆಯವರು, ಪ್ರಯಾಣದಲ್ಲಿ ಸಹಪ್ರಯಾಣಿ ಕರು, ಕಚೇರಿಯಲ್ಲಿ ಸಹೋದ್ಯೋಗಿಗಳು ಹೀಗೆ.

ಈ ಪ್ರಪಂಚದಲ್ಲಿರುವ ಎರಡು ಶತಕೋಟಿಗಿಂತಲೂ ಮಿಗಿಲಾಗಿರುವ ಜನ ಸಂಖ್ಯೆಯಲ್ಲಿ ನಮ್ಮ ವೈಯಕ್ತಿಕವಾದ ಆಸ್ತಿತ್ವವನ್ನು ನಾವು ಕಂಡುಕೊಳ್ಳಬೇಕು, ಬೇರೆಯವರು ಕೂಡ ನಮ್ಮ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕು, ನಮ್ಮ ಕಷ್ಟ ಸುಖಗಳನ್ನು ಅರಿಯಬೇಕು. ನಮ್ಮನ್ನು ಮಹತ್ವದ ವ್ಯಕ್ತಿಗಳೆಂದು ಭಾವಿಸ ಬೇಕು—ನಮ್ಮ ಈ ಬಗೆಯ ಅಗತ್ಯವೇ ಗೆಳೆಯರನ್ನು ಅರಸುವಂತೆ ಮಾಡುತ್ತದೆ.

ಂಥದೇ ಅಗತ್ಯ ಬೇರೆಯವರಿಗೂ ಇರುತ್ತದೆ. ಆದ್ದರಿಂದ ನಾವು ಎಂಥ ಗೆಳೆಯ ನ್ನು ಬಯಸುತ್ತೇವೆಯೊ, ಅಂಥವರ ಇದೇ ಬಗೆಯ ಆವಶ್ಯಕತೆಗಳನ್ನು ಪೂರೈ ುವತ್ತ ಮನಸ್ಸು ಕೊಡಬೇಕು. ನಮ್ಮ ಈ ಅಗತ್ಯಗಳಿಗೆ ಓಗೊಡಬಲ್ಲ ಗೆಳೆಯ ಕ್ಕಿದೊಡನೆಯೆ ನಿಜವಾಗಿಯೂ ಕೃತಾರ್ಥರಾದೆವೆನಿಸುತ್ತದೆ. ಎಷ್ಟೋ ಮಂದಿ ರಿಯಾದ ಗೆಳೆಯರನ್ನು ಪಡೆದಾಗ ಹಡೆದು ಸಾಕಿದ ತಂದೆತಾಯಿಗಳನ್ನೂ ಮರೆತುಬಿಡುತ್ತಾರೆ. ಗೆಳೆಯರಿಗಾಗಿ ಮನೆಯವರ ತಿರಸ್ಕಾರಕ್ಕೆ ಒಳಗಾಗುವ, ್ಯಯ್ಗಳನ್ನು ತಿನ್ನುತ್ತ ಛೀಮಾರಿ ಹಾಕಿಸಿಕೊಳ್ಳುವ ಹಾಗೂ ಸ್ವಂತ ಸಂಸಾರದ ುಖ ನೆಮ್ಮದಿಗಳನ್ನು ಬದಿಗೊತ್ತುವ ಜನಗಳನ್ನು ನೀವು ನೋಡಿರಬಹುದು. ದು ಹೀಗೆ ಏಕೆಂದರೆ ಗೆಳೆಯರೊಡನೆ ಕುಳಿತಾಗ ಉಂಟಾಗುವ ಆನಂದ, ಹೆಚ್ಚು ರಿಕೆ ಅವರಿಗೆ ಮನೆಯವರ ಸಹವಾಸದಲ್ಲಿ ಉಂಟಾಗುವುದಿಲ್ಲ.

## ೬) ಸ್ನೇಹ ನಮ್ಮನ್ನು ಯಾವಾಗ ನಿರಾಶೆಗೊಳಿಸುತ್ತದೆ ?

ಕೆಲವೊಮ್ಮೆ ಸ್ನೇಹ ನಮ್ಮನ್ನು ನಿರಾಶೆಗೊಳಿಸುವುದುಂಟು. ಗೆಳೆಯರ ಸರುಗಳನ್ನು ಕೇಳುತ್ತಲೇ ಸಿಟ್ಟಿಗೇಳುತ್ತೇವೆ. ಆದರೆ ಇಂಥ ಸಂದರ್ಭಗಳಲ್ಲಿ ಾವು ಸ್ನೇಹ ಎಂದು ಭಾವಿಸಿಕೊಂಡಿದ್ದು ನಿಜವಾಗಿ ಸ್ನೇಹವೊ ಅಥವಾ ಕೇವಲ ರಿಚಯ ಮಾತ್ರವೊ ಎಂಬುದನ್ನು ಆಲೋಚಿಸುವ ಗೋಜಿಗೆ ಹೋಗುವುದಿಲ್ಲ.

ಹೌದು, ನೂರಕ್ಕೆ ತೊಂಬತ್ತು ಸಂದರ್ಭಗಳಲ್ಲಿ ನಾವು ಕೇವಲ 'ಪರಿಚಯ' ನ್ನು ಸ್ನೇಹ ಎಂದು ಭಾವಿಸಿಕೊಂಡು ಅಂಥ ಗೆಳೆಯರ ಬಗೆಗೆ ದೊಡ್ಡ ದೊಡ್ಡ ಸೆಗಳನ್ನು ಹೊತ್ತಿರುತ್ತೇವೆ. ಸೌಜನ್ಯಕ್ಕೆಂದು ಯಾರಾದರೂ ನಮ್ಮೊಡನೆ ಗುತ್ತಾ ಮಾತಾಡಿದರೆ ಅದನ್ನೇ ನಾವು ಸ್ನೇಹ ಎಂದು ತಿಳಿದುಕೊಂಡುಬಿಡು ೀವೆ. ಈ ಬಗೆಯ ಸ್ನೇಹದಿಂದ ನಿರಾಶೆಯಲ್ಲದೆ ಮತ್ತೇನು ದೊರೆಯಲು ನೆ ಸಾಧ್ಯ ?

ಈ ರೀತಿಯ ನಿರಾಶೆಯಿಂದ ತಪ್ಪಿಸಿಕೊಳ್ಳಬೇಕಾದರೆ ನಾವು ಈ 'ಗೆಳೆಯ' ಂಬ ಪದದ ವ್ಯಾಪಕಾರ್ಥದಿಂದ ಬಚಾವಾಗಬೇಕು.

ಒಬ್ಬ ವ್ಯಕ್ತಿ ನನಗೆ ಪರಿಚಿತ, ನನ್ನ ಸಹಪಾಠಿ, ಸಹೋದ್ಯೋಗಿ, ಜೊತೆ ್ರಯಾಣಿಕ, ಒಳ್ಳೆಯ ಗಿರಾಕಿ, ಉದ್ಯಮದಲ್ಲಿ ಜೊತೆಗಾರ, ನೆರೆಯವ— ಾಮಾನ್ಯವಾಗಿ ಇಂಥ ಕಡೆಗಳಲ್ಲೆಲ್ಲ 'ಗೆಳೆಯ' ಎಂಬ ಪದದ ಪ್ರಯೋಗ ಸಲಿಗೆ ಾಗಿಯೆ ಆಗುವುದುಂಟು. ಆದರೆ ಮೇಲೆ ಹೇಳಿದ ಇಂಥ ಸಂಬಂಧಗಳೆಲ್ಲ ಗೆಳೆ ನದ ಮೊದಲ ರೂಪಗಳಷ್ಟೆ ಹೊರತು 'ಗೆಳೆತನ' ಅಲ್ಲ ಎಂಬುದನ್ನು ಮರೆಯ

೬



# ನಿಜವಾದ ಗೆಳೆಯರು ಖಂಡಿತ ಸಿಕ್ಕಲಾರರೆ?

ಒಂದು ವೇಳೆ ಯಾರಾದರೂ ಒಬ್ಬ ಮನುಷ್ಯ ಹೆಮ್ಮೆಯಿಂದ 'ನನಗೆ ಗೆಳೆಯರೇ ಇಲ್ಲ' ಅಂತ ಹೇಳಿಕೊಂಡರೆ ಅವನ ಮಾತಿನ ಆಶಯ ಹೀಗಿರುತ್ತದೆ—'ನನ್ನ ನಂಬಿಕೆಗೆ ಅರ್ಹರಾದವರು ಯಾರೂ ಇಲ್ಲ. ನಾನು ಬದುಕಿನ ಹೋರಾಟದಲ್ಲಿ ಒಬ್ಬನೇ ಸೆಣಸಾಡಿ ಗೆಲುವು ಪಡೆಯುತ್ತೇನೆ. ನಾನು ಯಾರನ್ನೂ ನಂಬಲಾರೆ.'

ಇಷ್ಟು ದೊಡ್ಡ ಪ್ರಪಂಚದಲ್ಲಿ ಒಬ್ಬ ವ್ಯಕ್ತಿ ತಾನು ಒಂಟಿಯಾಗಿರುವುದರಲ್ಲಿ ಹೆಮ್ಮೆಪಟ್ಟರೆ ಅದಕ್ಕೆ ಕಾರಣ ಇಲ್ಲದಿಲ್ಲ. ಇಂಥ ವ್ಯಕ್ತಿಯ ಒಳಮನಸ್ಸಿನಲ್ಲಿ ಇಣುಕಿನೋಡಿದರೆ ಈ ವ್ಯಕ್ತಿಗೆ ಸ್ನೇಹಿತರನ್ನು ಮಾಡಿಕೊಳ್ಳಲು ತುಂಬಾ ಇಷ್ಟ ಇದೆ, ಆದರೆ ಸ್ನೇಹದ ಜವಾಬ್ದಾರಿ ಮಾತ್ರ ಈತನಿಗೆ ಬೇಡ ಎಂಬ ಅಂಶ ಗೊತ್ತಾಗುತ್ತದೆ.

ಈ ಬಗೆಯ ಜನರನ್ನು ವಿಶ್ಲೇಷಿಸಿ ನೋಡಿದಾಗ ಹೊರಬಿದ್ದ ಕೆಲವು ವಾಸ್ತ ...ಾಂಶಗಳು ಹೀಗಿವೆ—

ಇಂಥ ಜನರಲ್ಲಿ ಬೇರೆಯವರಿಗೆ ಸಹಕಾರ ನೀಡುವ ಇಲ್ಲವೆ ನೆರವಾಗುವ ...ಭ್ಯಾಸ ಮೊದಲಿಂದಲೂ ಬೆಳೆದುಬಂದಿರುವುದಿಲ್ಲ. ಹಾಗಾಗಿ ಅವರು ಬಾಲ್ಯ ...ಂದಲೇ ಸಂಕೋಚಪ್ರವೃತ್ತಿಯವರಾಗಿರುತ್ತಾರೆ. ಇದರಿಂದ ಅಪರಿಚಿತ ವ್ಯಕ್ತಿ ...ಳು ಎದುರಾದಾಗ ಅವರು ಗಾಬರಿಗೊಳ್ಳುತ್ತಾರೆ. ವಯಸ್ಸಿಗೆ ಬಂದಮೇಲೂ ...ವರು ಹೊಸ ಜನರನ್ನು ಸಹಿಸಲಾರರು. ಗೆಳೆತನ ಪಡೆದುಕೊಳ್ಳಲು ಇಂಥ ಜನ ...ಾವೇ ಮುಂದೆ ಕೈಚಾಚುವುದಿಲ್ಲ. ಎಲ್ಲಿ ಕೈಕೊಡವಿಕೊಂಡು ಬಿಡುತ್ತಾರೊ ಎಂಬ ...ಯ ಕಾಡತೊಡಗಿರುತ್ತದೆ. ಆದರೆ ಉಳಿದವರು ಗೆಳೆಯರ ಸಹವಾಸದಲ್ಲಿ ಕೇಕೆ ...ಾಕಿ ನಗುತ್ತಿರುವಾಗ ತಮಗೆ ತಾವೇ ಸಮಾಧಾನ ಮಾಡಿಕೊಳ್ಳುತ್ತಾ ಇವರು ...ನ್ನುತ್ತಾರೆ—'ಸ್ನೇಹಿತರು ದ್ರೋಹಿಗಳು.'

ಅಂತಹವರಲ್ಲೇ ಕೆಲವು ಮಂದಿ ವಿಪರೀತವಾಗಿ ಕೆಲಸ ಕಾರ್ಯಗಳಲ್ಲಿ ತೊಡಗಿ ...ಡುತ್ತಾರೆ. ಆಮೇಲೆ ಈ ರೀತಿ 'ಬಿಜಿ'ಯಾಗಿರುವುದರಲ್ಲೇ ಸಂತೋಷವನ್ನು ...ಣತೊಡಗುತ್ತಾರೆ. ಗೆಳೆಯರಿಗಾಗಿ ಅವರ ಬಳಿ ಸಮಯ ಇರುವುದಿಲ್ಲ. ಹೀಗೆ ...ಲಸಕಾರ್ಯಗಳಲ್ಲಿ ಬಿಡುವಿರದೆ ತೊಡಗಿರುವುದೆ ಕಾರಣವಾಗಿ ಅವರು ಜನರೊಡನೆ ...್ನೇಹ ಬೆಳೆಸಲು ಹೋಗುವುದಿಲ್ಲ. ಇಂಥವರ ಮಾತೆಂದರೆ—'ಸ್ನೇಹಿತರು ...ಮಯ ಹಾಳುಮಾಡುವವರು.'

ಎಷ್ಟೋ ವೇಳೆ ಸ್ನೇಹಿತರಿಲ್ಲವಲ್ಲ ಎಂಬ ಕೊರತೆ ವಿಪರೀತ ಕಾಡತೊಡಗಿ ...ಾಗ ಅಂಥ ನಾಚಿಕೆಗೇಡಿತನದಿಂದ ಬಚಾಯಿಸಿಕೊಳ್ಳಲು ಇಂಥ ಮಂದಿ ಯಾವು ...ಾದರೂ ಒಬ್ಬ ವ್ಯಕ್ತಿಯೊಡನೆ ಗೆಳೆತನ ಬೆಳೆಸಿ ಆತನನ್ನು ಎಷ್ಟು ಹಚ್ಚಿಕೊಂಡು ...ಡುತ್ತಾರೆಂದರೆ ಆತನ ವೈಯಕ್ತಿಕ ಸ್ವಾತಂತ್ರ್ಯಕ್ಕೇ ಧಕ್ಕೆ ಉಂಟಾಗುತ್ತದೆ. ತನ್ನ ...ಳೆಯ ಯಾವಾಗಲೂ ತನ್ನ ತಲೆಯ ಮೇಲೆ ಕೂತಿರಲಿ ಅಂತ ಯಾವ ಮನುಷ್ಯ ...ಾನೆ ಬಯಸಿಯಾನು? ಹಾಗಾಗಿ ಹೊಸದಾಗಿ ಗೆಳೆಯನಾದವನು ಹಿಂದೆಗೆಯ ...ೊಡಗುತ್ತಾನೆ. ಅಂಥ ಗೆಳೆಯನ ಸಪ್ಪೆ ವ್ಯವಹಾರದಿಂದಾಗಿ ನಮ್ಮ ವಿಂತ್ರಾ ...್ಲೇಷಕ ಮಹಾಶಯರು ಗೆಳೆತನದ ಬಗೆಗೆ ಇನ್ನೂ ಕಹಿ ಅನುಭವ ಪಡೆದಂತಾಗು ...್ತದೆ. ಸ್ನೇಹಿತರು ಅಂದರೆ ಸಾಕು—ಬೈಯತೊಡಗುತ್ತಾರೆ. 'ಒಂಟಿತನ'ಕ್ಕಿಂತ ...ುಗಿಲಾದ ಗೆಳೆಯ ಯಾವುದೂ ಇಲ್ಲ ಎಂಬ ಅಭಿಪ್ರಾಯವನ್ನು ಮುಂಬರುವ ...ೀಳಿಗೆಯವರಲ್ಲೂ ಭದ್ರವಾಗಿ ಮೂಡಿಸಲು ಇವರು ಪ್ರಯತ್ನಿಸುತ್ತಾರೆ.

ಇಂಥವರ ಮನಸ್ಸಿನಲ್ಲಿ ಹರಯದಿಂದಲೂ ಕೂಡಿಕೊಂಡು ಬಂದಿದ್ದ

ಸಭೆಸಮಾರಂಭಗಳಲ್ಲಿ ಭಾಗವಹಿಸದಿದ್ದರೆ, ಪ್ರಯಾಣಮಾಡುವ ಮನಸ್ಸಿಲ್ಲದವನಾಗಿದ್ದರೆ, ಜನಗಳ ಜೊತೆ ಬೆರೆಯುವುದಕ್ಕೆ ಸಮಯ ಇಲ್ಲದವನಾಗಿದ್ದರೆ ಅಂಥವನು ತನಗೆ ಮಿತ್ರರಿಲ್ಲವೆಂದು ಹುಬ್ಬೇರಿಸಿ ಆಶ್ಚರ್ಯಪಡುವ ಅಗತ್ಯವಿಲ್ಲ.

ಒಂದು ವೇಳೆ ಒಬ್ಬ ಮನುಷ್ಯ ತನಗೆ ಖಾಯಂ ಆಗಿ ಹೊಗಳುವ ವ್ಯಕ್ತಿ ದೊರಕಬೇಕೆಂಬ ಉದ್ದೇಶದಿಂದ ಸ್ನೇಹಹಸ್ತ ಚಾಚಿದರೆ ಅಂಥವನಿಗೆ ಗೆಳೆಯರು ದೊರೆಯಲಾರರು. ಏಕೆಂದರೆ ಅಂಥವನಿಗೆ ನಿಜವಾದ ಗೆಳೆಯರು ಶತ್ರುಗಳಾಗಿ ಕಾಣಿಸುತ್ತಾರೆ ಹಾಗೂ ಹೊಗಳಿಕೆಯೆ ಸ್ನೇಹದ ಮುಖವಾಡ ಧರಿಸಿಬಿಡುತ್ತದೆ. ಭಟ್ಟಂಗಿಗಳೇ ಅವನಿಗೆ ಆತ್ಮೀಯರಾಗಿಬಿಡುತ್ತಾರೆ.

ಇಲ್ಲಿ ಹೊಗಳಿಕೆ ಮತ್ತು ಭಟ್ಟಂಗಿತನಗಳ ನಡುವೆ ವ್ಯತ್ಯಾಸ ತಿಳಿಯುವುದು ಅಗತ್ಯ. ಯಾವುದೇ ಗುಣವನ್ನು ಒಪ್ಪಿಕೊಂಡು ಅದರ ಬಗ್ಗೆ ಪ್ರಶಂಸೆಮಾಡುವುದು 'ಹೊಗಳಿಕೆ' ಎನಿಸಿಕೊಳ್ಳುತ್ತದೆ. ಇಲ್ಲದ ಗುಣವನ್ನು ಆರೋಪಿಸಿ ಅಟ್ಟಕ್ಕೇರಿಸುವುದು 'ಭಟ್ಟಂಗಿತನ' ಅಂತ ಕರೆಸಿಕೊಳ್ಳುತ್ತದೆ. ಪ್ರತಿಯೊಂದು ಸಂದರ್ಭದಲ್ಲೂ ಟೀಕೆ ಮಾಡುತ್ತಿರುವುದು ಯಾವಾಗಲೂ ಹೊಗಳುತ್ತಾ ಭಟ್ಟಂಗಿಗಳಾಗುವಷ್ಟೆ ಅಪಾಯಕಾರಿ. ನಿಜವಾದ ಗೆಳೆಯ ಹೊಗಳಲು ಯೋಗ್ಯವಾದ ಸಂದರ್ಭಗಳಲ್ಲಿ ಮಾತ್ರ ಬೆನ್ನುತಟ್ಟಿ ತನ್ನ ಆನಂದವನ್ನು ವ್ಯಕ್ತಪಡಿಸುತ್ತಾನೆ ಹಾಗೂ ತನಗೆ ಉಚಿತವಲ್ಲವೆಂದು ಕಂಡುಬರುವ ಕೆಲಸವನ್ನು ಯಾರಾದರೂ ಮಾಡಿದರೆ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿ ತಿದ್ದಲು ಪ್ರಯತ್ನಪಡುತ್ತಾನೆ. ಸ್ನೇಹ ಸಂಬಂಧ ಖಾಯಂ ಆಗಿ ಉಳಿದುಕೊಂಡು ಬರಬೇಕಾದರೆ ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯಗಳನ್ನು ಇನ್ನೊಬ್ಬರಿಗೆ ಮನದಟ್ಟಾಗುವಂತೆ, ಬೇಸರ ಉಂಟಾಗದಂತೆ ಸ್ಪಷ್ಟಪಡಿಸುವುದು ಅಗತ್ಯ,

ಸ್ನೇಹಕ್ಕೆ ಯೋಗ್ಯರಾದ ಜನ ಕಂಡುಬಂದಲ್ಲಿ ಅಂಥವರ ಜೊತೆ ನಿಧಾನವಾಗಿ ಸಂಪರ್ಕವನ್ನು ಬೆಳೆಸಿಕೊಳ್ಳುತ್ತಾ ಹೋಗುವುದು ಉಚಿತ. ಕೆಲವು ಮಂದಿ ಈ ವಿಚಾರದಲ್ಲಿ ತುಂಬ ಅವಸರ ತೋರಿಸುತ್ತಾರೆ. ಇದ್ದಕ್ಕಿದ್ದಂತೆ ತುಂಬ ಹತ್ತಿರ ಬಂದುಬಿಡುತ್ತಾರೆ. ಗೆಳೆಯನನ್ನು ಪೂರ್ತಿಯಾಗಿ ಅರ್ಥ ಮಾಡಿಕೊಳ್ಳುವುದಕ್ಕೆ ಮುಂಚೆಯೆ ತಮ್ಮವನಾಗಿಸಿಕೊಳ್ಳುವುದಕ್ಕೆ ಹಾತೊರೆಯುತ್ತಾರೆ. ಇಂಥ ಜನ ಎಷ್ಟು ಬೇಗ ಸ್ನೇಹದ ಕಂಕಣವನ್ನು ತೊಡಲು ಸಿದ್ಧರಾಗುತ್ತಾರೋ ಅಷ್ಟೇ ಅವಸರದಲ್ಲಿ ಅದನ್ನು ತೊಡೆಯಲೂ ತಯಾರಾಗುತ್ತಾರೆ. ಒಂದು ವೇಳೆ ಅವರೇ ತೊಡೆಯದೆ ಹೋದರೂ, ರೋಸಿದ ಗೆಳೆಯ ತಾನೇ ಈ ಒಳ್ಳೆಯ ಕೆಲಸ ಮಾಡಿಬಿಡುತ್ತಾನೆ.

ಕೆಲವು ಮಂದಿ ತಪ್ಪುತಿಳಿವಳಿಕೆಯ ಆಧಾರದ ಮೇಲೆ ಸ್ನೇಹಕ್ಕೆ ತಿಲಾಂಜಲಿ ...ಡಿಬಿಡುತ್ತಾರೆ. ಬಿಚ್ಚು ಮನಸ್ಸಿನಿಂದ ಮಾತಾಡಿ ಅಂಥ ತಪ್ಪು ತಿಳಿವಳಿಕೆ ...ಯನ್ನು ಬಗೆಹರಿಸಿಕೊಳ್ಳುವ ಎದೆಗಾರಿಕೆ ಅವರಿಗೆ ಇರುವುದಿಲ್ಲ. ಅಂಥ ಜನ ಈ ...ಕಂಡಂತಹ ಎರಡು ಕೆಲಸಗಳನ್ನು ಮಾಡುತ್ತಾರೆ.

೧. ಮನಸ್ಸಿನಲ್ಲೇ ತಮ್ಮ ಈ ನಿಲುವಿಗೆ ಹಾಲೆರೆಯುತ್ತಾ ಹೋಗುತ್ತಾರೆ.

೨. ತಮ್ಮ ದೂರನ್ನು ಬೇರೊಬ್ಬ ವ್ಯಕ್ತಿಯ ಮೂಲಕ ಗೆಳೆಯನಿಗೆ ತಲಪಿಸುತ್ತಾರೆ. ಬೇರೆ ಮಾತಿನಲ್ಲಿ ಹೇಳಬೇಕೆಂದರೆ ಅವರು ಚಾಡಿ ಕೋರರಾಗುತ್ತಾರೆ.

ಈ ಎರಡೂ ವಿಚಾರಗಳು ಸ್ನೇಹವನ್ನು ಕೆಡಿಸುತ್ತಾ ಹೋಗುತ್ತವೆ. ಇಂಥ ...ಂದರ್ಭಗಳು ಎದುರಾದಾಗ ತೆರೆದ ಮನಸ್ಸಿನಿಂದ ಮಾತಾಡಿ ಭಿನ್ನಾಭಿಪ್ರಾಯ ...ಳನ್ನು ದೂರಮಾಡಿಕೊಳ್ಳುವುದು ಒಳಿತು.

ಸ್ನೇಹಿತರನ್ನು ಆರಿಸಿಕೊಳ್ಳಬೇಕಾದರೆ ಅವರ ಮತ್ತು ನಮ್ಮ ನಡುವಣ ...ಮಾಜಿಕ ಸ್ಥಿತಿಗತಿಗಳನ್ನೂ ಸ್ಥಾನಮಾನಗಳನ್ನೂ ಹೋಲಿಸಿನೋಡುವುದು ...ಳ್ಳೆಯದು. ಒಂದುವೇಳೆ ನಿಮ್ಮ ಗೆಳೆಯ ನಿಮಗಿಂತ ಹೆಚ್ಚು 'ಬಿಜಿ'ಯಾದವ ...ಂದರೆ ಅಥವಾ ಶ್ರೀಮಂತನಾಗಿ ನಿಮಗಾಗಿ ಹೆಚ್ಚು ಹಣ ಖರ್ಚುಮಾಡುವವ ...ಗಿದ್ದು ನೀವು ಅವನಿಗಾಗಿ ಅಷ್ಟು ಮಾಡಲು ಸಾಧ್ಯವಿರದಿದ್ದರೆ, ನೀವು ಗೆಳೆಯ...ನ್ನು ಆರಿಸಿಕೊಳ್ಳುವಲ್ಲಿ ತಪ್ಪು ಮಾಡುತ್ತಿದ್ದೀರೆಂದು ಖಚಿತಪಡಿಸಿಕೊಳ್ಳಿ.

ಇಂಥ ವ್ಯಕ್ತಿಗಳೊಡನೆ ಸಂಬಂಧ ಕಡಿದುಕೊಳ್ಳಬೇಕೆನ್ನುವುದು ಈ ಮಾತಿನ ...ಶಯವಲ್ಲ. ಇಂಥವರೊಡನೆ ಪರಿಚಯ ಇಟ್ಟುಕೊಳ್ಳಲು ಅಡ್ಡಿಯೇನಿಲ್ಲ. ...ಚ್ಚು ಮಂದಿಯ ಪರಿಚಯವಿದ್ದರೆ ಅಂಥ ತೊಂದರೆಯೇನಿಲ್ಲ. ನಮ್ಮ ದೈನಂದಿನ ...ದುಕಿನ ಹೋರಾಟದಲ್ಲಿ ಹೆಚ್ಚು ಹೆಚ್ಚು ಜನರ ಸಹಾಯ ಸಹಾನುಭೂತಿ ದೊರೆ...ಷ್ಟೂ ಗೆಲುವಿನ ಅವಕಾಶಗಳು ಹೆಚ್ಚಾಗುತ್ತಾ ಹೋಗುತ್ತವೆ.

## ...) ಗೆಳೆತನ ಹೇಗೆ ಒಡೆಯುತ್ತದೆ ?

ಕಡೆಯದಾಗಿ ಸ್ನೇಹ ಹೇಗೆ ಉಳಿದುಕೊಂಡುಬರುತ್ತದೆ ಎಂಬುದಕ್ಕಿಂತ ...ಗಿಲಾಗಿ ಅದು ಏತಕ್ಕೋಸ್ಕರ ಒಡೆಯುತ್ತದೆ ಎಂಬುದನ್ನು ತಿಳಿಯಪಡಿಸಿದರೆ ...ಚ್ಚು ಉಪಯೋಗವಾಗುತ್ತದೆ. ಸ್ನೇಹ ಹಾಳಾಗುವ ಇಪ್ಪತ್ತು ಕಾರಣಗಳನ್ನು ...ಲ್ಲಿ ಪಟ್ಟಿಮಾಡಲಾಗಿದೆ. ಇವು ಯಾವುವೆಂದರೆ :

ಸಾಧ್ಯ. ಈ ರೀತಿಯಲ್ಲಿ ಪ್ರಕೃತಿ ನಮ್ಮನ್ನು ಸ್ವಲ್ಪಕಾಲ ಉನ್ಮಾದಾವಸ್ಥೆಗೆ ತಲ ಪಿಸಿ ನಾವು ಖಾಯಂ ಆಗಿ ಹುಚ್ಚರಾಗುವುದನ್ನು ತಪ್ಪಿಸುತ್ತದೆ.

ಕೋಪ ಎಂಬ ಈ ಬಗೆಯ ಆವೇಗ ಅಥವಾ ಭಾವನಾತ್ಮಕ ಒತ್ತಡ ಕೆಳ ಕಾಣಿಸಿರುವ ನಾಲ್ಕು ರೀತಿಯ ಪ್ರತಿಕ್ರಿಯೆಗಳ ಮೂಲಕ ಪ್ರಕಟಗೊಳ್ಳುತ್ತದೆ.

(ಅ) ಆವೇಶ

(ಆ) ರೇಗುವುದು ಅಥವಾ ಸಿಡುಕುವುದು ಇಲ್ಲವೆ ಗೊಣಗಾಡುವುದು.

(ಇ) ಅಳುವುದು

(ಈ) ಶಾಂತಿಯ ಅತಿರೇಕ

(ಅ) **ಆವೇಶ :** ಸಾಮಾನ್ಯವಾಗಿ ಈ ಸ್ಥಿತಿಗೇ ನಾವು ಕೋಪ ಅಥವಾ ಸಿಟ್ಟು ಎಂದುಬಿಡುತ್ತೇವೆ. ಸಿಟ್ಟಿನ ಈ ಸ್ಥಿತಿಯ ಚಿತ್ರಣವನ್ನು ಒಂದೇ ವಾಕ್ಯ ದಲ್ಲಿ ಮಾಡಬಹುದು—'ಬಿಟ್ಟಬಾಯಿ, ಮುಚ್ಚಿದ ಕಣ್ಣು.' ಸಿಟ್ಟಿನ ಈ ಸ್ಥಿತಿಯ ಪ್ರಯೋಗ ಸಾಧಾರಣವಾಗಿ ದೊಡ್ಡವರಿಂದ (ಹಣ, ಅಧಿಕಾರ. ವಯಸ್ಸು ಯಾವುದಾದರೂ ಪರವಾಗಿಲ್ಲ) ಸಣ್ಣವರ ಮೇಲೆ ನಡೆಯುತ್ತದೆ. ಪಿಂಗಾಣಿ ಪಾತ್ರೆ-ಕಾಸೇ ಬಿದ್ದು ಒಡೆದರೇನಂತೆ, ಬೈಗುಳ ತಿನ್ನುವುದು ಜವಾನನೇ. ಏಕೆಂದರೆ ಅವನು ಅದನ್ನು ಸರಿಯಾದ ಜಾಗದಲ್ಲಿ ಇಟ್ಟಿರುವುದಿಲ್ಲವಲ್ಲ ! ಇಂಥ ವೇಳೆಯಲ್ಲಿ ಸಿಟ್ಟಿಗೆದ್ದ ಮನುಷ್ಯನಿಗೆ ತಾನು ಏನು ಹೇಳುತ್ತಿರುವೆನೆಂಬ ಪರಿವೆ ಇರುವುದಿಲ್ಲ. ಬಾಯಲ್ಲಿ ಶಬ್ದಗಳು ಸಹ ಸರಿಯಾಗಿ ಹೊರಡುವುದಿಲ್ಲ. ಸಿಟ್ಟಿನ ಈ ಸ್ಥಿತಿಗೆ ಒಳಗಾಗಿಯೆ ಜನ ಖೂನಿಯನ್ನು ಮಾಡಿಬಿಡುತ್ತಾರೆ ಇಲ್ಲವೆ ತಾವೇ ಆಸ್ಪತ್ರೆಗೆ ದಾಖಲಾಗುತ್ತಾರೆ.

(ಆ) **ಗೊಣಗುಟ್ಟುವುದು:** ಕೋಪವನ್ನು ಪೂರ್ಣ ಪ್ರಮಾಣದಲ್ಲಿ ಹೊರ ಗೆಡವಲು ಸಾಧ್ಯವಾಗದೆ ಹೋದಾಗ ನಾವು ಇನ್ನೊಬ್ಬರ ಎದುರಿನಲ್ಲಿ ರೇಗುತ್ತೇವೆ ಅಥವಾ ಸಿಡುಕುತ್ತೇವೆ. ಕೆಲವು ವೇಳೆ ಮನಸ್ಸಿನಲ್ಲೇ ಸಿಡಿಮಿಡಿಗೊಳ್ಳುವುದೂ ಉಂಟು. ತುಟಿಯಲ್ಲೇ ಗೊಣಗಾಡುವುದು ಸಹ ಉಂಟು. ಆದರೆ ಕೋಪಕ್ಕೆ ಪಾತ್ರರಾದವರಿಗೆ ನಾವು ಅವರ ಬಗ್ಗೆ ಹಾಗೆ ಸಿಟ್ಟಾಗಿದ್ದೇವೆಂದು ತಿಳಿಯದ ರೀತಿ ಯಲ್ಲಿ ನೋಡಿಕೊಳ್ಳುತ್ತೇವೆ.

(ಇ) **ಅಳುವುದು :** ಕೇವಲ ಗೊಣಗಾಡುವುದರಿಂದ ಮಾತ್ರ ತೃಪ್ತಿ ಸಮಾಧಾನಗಳು ಸಿಗದೆ ಹೋದರೆ ಹಾಗೂ ಕೋಪವನ್ನು ಆವೇಶದ ಮೂಲಕ ಹೊರಗೆ ಹಾಕಲು ಸಾಧ್ಯವಾಗದೆಹೋದರೆ ಅಳು ಬಂದುಬಿಡುತ್ತದೆ. ಇದು ಕೋಪದ ಅಸಹಾಯಕತೆಯ ಸ್ಥಿತಿ. ಮಕ್ಕಳು ಹಾಗೂ ಹೆಂಗಸರು ಸಾಮಾನ್ಯ

ವಾಗಿ ತಮ್ಮ ಕೋಪವನ್ನು ಪ್ರಕಟಿಸಲು ಅಳುವಿಗೆ ಮೊರೆಹೋಗುವುದುಂಟು.

**(ಈ) ಶಾಂತಿಯ ಅತಿರೇಕ :** ಸಾಧಾರಣವಾಗಿ ಯಾವುದಾದರೂ ಮನುಷ್ಯ ಕೆನ್ನೆಗೆ ಏಟು ಹೊಡೆದರೆ ಅವನು ಮೇಲ್ಕಂಡ ಮೂರು ಪ್ರತಿಕ್ರಿಯೆಗಳಲ್ಲಿ ಯಾವುದಾದರೂ ಒಂದರ ಮೂಲಕ ತನ್ನ ರೋಷವನ್ನು ಹೊರಗೆಡವಬಹುದು. ಆದರೆ ಯೇಸುಕ್ರಿಸ್ತನಂತಹ ಅಪರೂಪದ ವ್ಯಕ್ತಿಗಳು ಈ ಮೂರನ್ನು ಬಿಟ್ಟು ನಾಲ್ಕನೆಯ ರೀತಿಯಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸುವುದುಂಟು. ಅಂಥವರು ಇನ್ನೊಂದು ಏಟು ತಿನ್ನಲು ಮತ್ತೊಂದು ಕೆನ್ನೆಯನ್ನು ಮುಂದೊಡ್ಡುತ್ತಾರೆ. ಈ ಶಾಂತಸ್ಥಿತಿಗೆ ಕೋಪದ ನಾಲ್ಕನೇ ಸ್ಥಿತಿ ಎನ್ನಬಹುದು. ಕೆನ್ನೆಗೆ ಏಟು ತಿಂದು ಅವರು ಕೊಪಾವಿಷ್ಟರಾಗಲಿಲ್ಲ, ಸಿಡಿಮಿಡಿಗೊಳ್ಳಲಿಲ್ಲ. ಅಳಲಿಲ್ಲ ; ಅಂದಮಾತ್ರಕ್ಕೆ ಸುಮ್ಮನೆ ಕೂರಲೂ ಇಲ್ಲ. ಏನಾದರೂ ಒಂದು ರೀತಿಯ ಪ್ರತಿಕ್ರಿಯೆ ಅವರಿಂದ ಹೊರಬಂತು. ಇನ್ನೊಂದು ಕೆನ್ನೆಯನ್ನು ಅವರು ಮುಂದಕ್ಕೆ ಒಡ್ಡಿದರು. ಕೋಪ ಬಂತು, ಆದರೆ ವಿವೇಕ ಅದರ ಸ್ವರೂಪವನ್ನು ಬದಲಾಯಿಸಿತು.

ಪ್ರತಿಯೊಂದು ಜೀವಿಯಲ್ಲೂ ಕೋಪ ಒಂದಲ್ಲ ಒಂದು ರೀತಿಯಲ್ಲಿ ಖಂಡಿತವಾಗಿಯೂ ಇರುತ್ತದೆ. ಯಾವುದೇ ವ್ಯಕ್ತಿಯಲ್ಲಿ ಯಾವುದೇ ಪ್ರಮಾಣದಲ್ಲಿ ಕೋಪ ಎಂಬ ಭಾವನೆ ಇರುವುದು ಸಹ ನಿಂದನೀಯವಲ್ಲ. ಇದೊಂದು ಸಹಜವಾದ, ಸ್ವಭಾವಜನ್ಯವಾದ ಪ್ರತಿಕ್ರಿಯೆಯನ್ನು ಸೂಚಿಸುವ ಭಾವನೆ. ಆದರೆ ಯಾವುದೇ ವ್ಯಕ್ತಿಗೆ ಕೋಪ ಮಾಡಿಕೊಳ್ಳುವುದು ಒಂದು ಬಗೆಯ ಗೀಳು ಅಥವಾ ಚಟ ಆಗಿಹೋದರೆ ಆದು ನಿಂದ್ಯವೆನಿಸುತ್ತದೆ.

ಸಿಗರೇಟು, ಜೂಜು, ಮದ್ಯಪಾನ ಮುಂತಾದವುಗಳನ್ನು ಕುರಿತು ಪ್ರಸ್ತಾಪಿಸುವಾಗ ಚಟ ಎಂಬ ಪದವನ್ನು ಬಳಸುವುದುಂಟು. ಈ ಸಂದರ್ಭದಲ್ಲಿ ಈ ಪದದ ಬಳಕೆಯನ್ನು ಕಾರಣವಿಲ್ಲದೆ ಮಾಡಿಲ್ಲ. ಮೇಲೆ ಹೇಳಿದಂತಹ ಚಟಗಳಿಗೆ ಒಳಗಾದವರಲ್ಲಿ ಆ ಸಮಯಕ್ಕೆ ಸರಿಯಾಗಿ ಕೆಲವು ವಿಶೇಷ ಗ್ರಂಥಿಗಳು ಸ್ರವಿಸಲು ಪ್ರಾರಂಭಿಸುತ್ತವೆ. ಈ ಚಟಗಳನ್ನು ಪೂರೈಸಿಕೊಳ್ಳಲು ಈ ಸ್ರಾವಗಳು ಪ್ರೇರಣೆ ನೀಡುತ್ತವೆ. ನಿರ್ದಿಷ್ಟ ಗ್ರಂಥಿಯೊಂದಕ್ಕೆ ನಿರ್ದಿಷ್ಟ ವಾತಾವರಣದಲ್ಲಿ ಸ್ರವಿಸುವ ಅಭ್ಯಾಸ ಉಂಟಾಗಿಬಿಟ್ಟರೆ ಅದು ಸುಲಭವಾಗಿ ಹೋಗುವುದಿಲ್ಲ. ಸೂಕ್ತ ಕಾಲಾವಧಿಯಲ್ಲಿ ಅದು ಸ್ರವಿಸದೆ ಹೋದರೆ, ಅಗತ್ಯವಿರಲಿ ಇಲ್ಲದೆ ಇರಲಿ ಬೇರೆ ಸಂದರ್ಭಗಳನ್ನು ಇಂಥ ಸ್ರಾವಕ್ಕಾಗಿ ಅದು ಉಪಯೋಗಿಸಿಕೊಳ್ಳುತ್ತದೆ. ಈ ರೀತಿಯಲ್ಲಿ ಸಿಟ್ಟಿನ ಚಟ ಬೆಳೆಸಿಕೊಂಡ ವ್ಯಕ್ತಿಗೆ ಕೋಪಗೊಳ್ಳಲು ಅಥವಾ ಸಿಡಿಮಿಡಿಗೊಳ್ಳಲು

೭

# ಹೌದು, ಕೋಪ ನಮ್ಮ ಹತ್ತಿರದ ಗೆಳೆಯನಾಗಬಲ್ಲದು!



ಅದು ಜಮೀನು ಹಂಚಿಕೆಗೆ ಸಂಬಂಧಪಟ್ಟ ವಿಚಾರ ಆಗಿತ್ತು. ಬಿಸಿಬಿಸಿ ವಾಗ್ವಾದ ನಡೆಯುತ್ತಿತ್ತು. ಮಾತಿಗೆ ಮಾತು ಬೆಳೆದು ಕೈಗೆ ಕತ್ತಿ ಚೂರಿಗಳು ಬಂದವು. ತಮ್ಮ ತುಂಬ ಆವೇಶಕ್ಕೊಳಗಾಗಿ ಚೂರಿಯಿಂದ ಅಣ್ಣನ ಹೊಟ್ಟೆಯನ್ನು ಬಗೆದುಹಾಕಿದ. ಪೋಲೀಸರು ವಿಚಾರಣೆ ನಡೆಸಿ ಕೊಲೆಗಾರನನ್ನು ಜೈಲಿಗೆ ಹಾಕಿದರು. ಆದರೆ ನ್ಯಾಯಾಲಯದ ಕಟೆಕಟೆಗೆ ಆರೋಪಿಯನ್ನು ಹತ್ತಿಸಲು ಅವರಿಂದ ಸಾಧ್ಯವಾಗಲಿಲ್ಲ. ಏಕೆಂದರೆ ಆರೋಪಿ ತನ್ನ ಪಾಲಿನ ನ್ಯಾಯವನ್ನು ತಾನೇ ಮಾಡಿಕೊಂಡಿದ್ದ. ಆವೇಶ ಇಳಿದ ಮೇಲೆ ಅವನು ಜೈಲಿನ ಗೋಡೆಗೆ ಪಟಪಟ ತಲೆ ಹೊಡೆದುಕೊಂಡು ಪ್ರಾಣತೆತ್ತಿದ್ದ.

ಒಂದೇ ಕುಟುಂಬದ ಇಬ್ಬರು ನಿಶ್ಶೇಷವಾಗಿಹೋದರು. ಭೂಮಿಯ ದೆಸೆಯಿಂದಲೆ? ಇಲ್ಲ, ಕೋಪದ ದೆಸೆಯಿಂದ.

ಪ್ರತಿದಿನವೂ ವೃತ್ತಪತ್ರಿಕೆಗಳಲ್ಲಿ ಇಂಥ ಅದೆಷ್ಟು ಪ್ರಸಂಗಗಳು ಅಚ್ಚಾಗು ತ್ತಿರಂತ್ತವೊ ಲೆಕ್ಕಹಾಕುವುದು ಕಷ್ಟ. ಅವುಗಳಲ್ಲಿ ಸಹ ಎಷ್ಟೋ ಪ್ರಸಂಗಗಳು ಪತ್ರಿಕೆಗಳವರೆಗೆ ಬರುವುದೇ ಇಲ್ಲ.

ಬಹಂಶಃ ಕೋಪ ಇಷ್ಟೊಂದು ವಿನಾಶಕಾರಿ ಎಂಬ ಕಾರಣದಿಂದಲೇ ನಮ್ಮ ಪುರಾಣಗಳು ಇದನ್ನು 'ನರಕದ ಇನ್ನೊಂದು ಬಾಗಿಲು' ಎಂದಿದ್ದರೆ ಕುರಾನ್ 'ಸೈತಾನನ ಸಂತತಿ' ಎಂದು ಕರೆದಿದೆ. ಯೇಸುಕ್ರಿಸ್ತ 'ಕೋಪ ಮನುಷ್ಯಮಾತ್ರ ರನ್ನು ಭಸ್ಮೀಭೂತ ಮಾಡುವ ಜ್ವಾಲಾಮುಖಿ' ಎಂದು ಹೇಳಿದ್ದಾನೆ.

ಆದರೆ ಇದೇ ಕೋಪ ನಮ್ಮ ಪಾಲಿಗೆ ಹತ್ತಿರದ ಗೆಳೆಯ ಸಹ ಆಗಬಲ್ಲದು ಎಂದು ನಾನು ಹೇಳಿದರೆ ನೀವು ಸಹಜವಾಗಿಯೆ ಆಶ್ಚರ್ಯಕ್ಕೆ ಒಳಗಾಗಬಹುದು. ಏಕೆಂದರೆ ಪ್ರಪಂಚದ ಎಲ್ಲೆಡೆಯಲ್ಲೂ ಸಂತರು ದಾರ್ಶನಿಕರು ಈ ಭಾವನೆಯನ್ನು ಅದೆಷ್ಟು ಅವಹೇಳನ ಮಾಡಿದ್ದಾರೆಂದರೆ ಇವತ್ತು ಗೆಳೆಯನ ರೂಪದಲ್ಲಿ ಅದನ್ನು ವಿವರಿಸಲು ಹೋದರೆ ವಿಚಿತ್ರವಾಗಿ ಕಂಡುಬರುವುದು ಸ್ವಾಭಾವಿಕ,

ಕೋಪ ನಮ್ಮ ಪಾಲಿಗೆ ಪರಮಮಿತ್ರ ಆಗಬಲ್ಲದೊ ಇಲ್ಲವೊ ಇದರ ಬಗ್ಗೆ ನೀವು ಅನಂತರ ಸ್ವತಃ ತೀರ್ಮಾನ ಮಾಡುವಿರಂತೆ. ಅದಕ್ಕೆ ಮುಂಚೆ ಕೋಪ ಎಂದರೆ ಏನು ಎಂಬುದನ್ನು ತಿಳಿಯೋಣ.

ಈ ಪ್ರಶ್ನೆಗೆ ಶರೀರಶಾಸ್ತ್ರಜ್ಞರು ಹಾಗೂ ಮನೋವಿಜ್ಞಾನಿಗಳು ಹೀಗೆ ಉತ್ತರ ಕೊಡುತ್ತಾರೆ—ನಮ್ಮ ಇಷ್ಟಕ್ಕೆ ಅನುಸಾರವಾಗಿ ಯಾವುದಾದರೂ ಕೆಲಸ ನಡೆಯದೆ ಹೋದಲ್ಲಿ ಶರೀರದಲ್ಲಿರುವ ನಿರ್ನಾಳ ಗ್ರಂಥಿಯೊಂದು (ಡಕ್ಟ್‌ಲೆಸ್ ಗ್ಲ್ಯಾಂಡ್) ಸ್ರವಿಸಲು ಪ್ರಾರಂಭಿಸುತ್ತದೆ. ಇದರ ಪರಿಣಾಮವಾಗಿ ರಕ್ತದಲ್ಲಿ ಸಕ್ಕರೆಯ ಪ್ರಮಾಣ ಹೆಚ್ಚುತ್ತದೆ, ರಕ್ತಸಂಚಾರ ತೀವ್ರವಾಗತೊಡಗುತ್ತದೆ. ಈ ತೀವ್ರ ಸಂಚಾರದ ದೆಸೆಯಿಂದಾಗಿ ನಮ್ಮನ್ನು ನಾವು ಅಧಿಕಬಲಶಾಲಿಗಳೆಂದು ತಿಳಿಯತೊಡಗುತ್ತೇವೆ. ಈ ಕ್ಷಣಿಕ ಶಕ್ತಿಯ ಅತಿರೇಕದಿಂದಾಗಿ ಆ ವೇಳೆಯಲ್ಲಿ ಏನು ಮಾಡುತ್ತಿದ್ದೇವೆಂಬ ಪರಿವೆಯೆ ನಮಗೆ ಇರುವುದಿಲ್ಲ.

ತಜ್ಞರು ಹೇಳುವುದೇನೆಂದರೆ ಆವೇಶಕ್ಕೊಳಗಾಗಿ ಅಥವಾ ಬೇರೆ ಯಾವು ದಾದರೂ ರೀತಿಯಿಂದ ಆ ಸ್ರಾವದ ಪರಿಣಾಮವನ್ನು ನಾವು ಹೊರಗೆ ಹಾಕದೆ ಹೋದರೆ ಅದು ನಮ್ಮ ಹೊಟ್ಟೆಯಲ್ಲಿ ಹುಣ್ಣನ್ನು ಉಂಟುಮಾಡಬಲ್ಲದು. ಅದ ರಿಂದಾಗಿ ನಮ್ಮ ರಕ್ತದ ಒತ್ತಡ ಏರಬಲ್ಲದು ಹಾಗೂ ಒಂದು ವೇಳೆ ಈ ಸ್ರಾವದ ಪರಿಣಾಮ ನಮ್ಮ ಮಿದುಳಿಗೆ ತಲಪಿದ್ದೇ ಆದರೆ ನಮಗೆ ಹುಚ್ಚು ಹಿಡಿಯಲೂ

೧. ತಾವೇ ಮಾತಾಡುತ್ತಾ ಹೋಗುವುದು ಹಾಗೂ ಬೇರೆಯವರ ಮಾತಿಗೆ ಕಿವಿಗೊಡದಿರುವುದು
೨. ಯಾವಾಗಲೂ ಹಿಂದೆ ಬಿದ್ದಿರುವುದು
೩. ತುಂಬಾ ಹೆಚ್ಚಾಗಿ ಅಥವಾ ತುಂಬಾ ಕಡಿಮೆ ಹೋಗಿಬರುವುದು
೪. ಕೇವಲ ತಮ್ಮ ಕೆಲಸ ಮಾಡಿಕೊಳ್ಳಲು ಮಾತ್ರ ಹೋಗುವುದು
೫. ಕೇವಲ ಸಾಲ ಕೊಡುತ್ತಿರುವುದು ಇಲ್ಲವೆ ತೆಗೆದುಕೊಳ್ಳುತ್ತಿರುವುದು
೬. ಅಗತ್ಯವಿಲ್ಲದೆ ಸ್ನೇಹಿತರ ಮನೆ ವ್ಯವಹಾರಗಳಲ್ಲಿ ತಲೆಹಾಕುವುದು
೭. ಸ್ನೇಹಿತನ ಭಾವನೆಗಳನ್ನು ಅಥವಾ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳದಿರುವುದು
೮. ತುಂಬಾ ಹೆಚ್ಚು ಅಥವಾ ಕಡಿಮೆ ಮಾತಾಡುವುದು
೯. ಕೇವಲ ಸ್ವಂತಲಾಭಕ್ಕಾಗಿ ಗೆಳೆತನವನ್ನು ಬಳಸಿಕೊಳ್ಳುವುದು
೧೦. ಹಣ ಹಾಗೂ ಸ್ಥಾನಮಾನಗಳನ್ನು ಲೆಕ್ಕಿಸದೆ ಸಮನಾಗಿಲ್ಲದ ವ್ಯಕ್ತಿಯೊಡನೆ ಸ್ನೇಹ ಬೆಳೆಸುವುದು
೧೧. ಯಾವಾಗಲೂ ಮುಖಸ್ತುತಿ ಮಾಡುತ್ತಿರುವುದು
೧೨. ಯಾವಾಗಲೂ ಸಣ್ಣಸಣ್ಣ ತಪ್ಪುಗಳನ್ನು ಎತ್ತಿ ಆಡುತ್ತಿರುವುದು
೧೩. ಆತ್ಮಪ್ರಶಂಸೆಯಲ್ಲಿ ಮುಳುಗಿರುವುದು
೧೪. ಸ್ನೇಹಿತರನ್ನು ಅಸಡ್ಡೆ ಮಾಡುವುದು
೧೫. ಧರ್ಮ ಮತ್ತು ರಾಜಕೀಯ ವಿಷಯಗಳಲ್ಲಿ ಸ್ವಂತ ಅಭಿಪ್ರಾಯಗಳನ್ನು ಹೇರುವುದು
೧೬. ಯಾವಾಗಲೂ ತಮ್ಮ ಗೋಳಿನ ಕಥೆಯನ್ನೇ ಹೇಳಿಕೊಳ್ಳುತ್ತಿರುವುದು
೧೭. ತುಂಬಾ ಶಿಷ್ಟಾಚಾರದಿಂದಿರುವುದು ಅಥವಾ ತೀರ ಸಲಿಗೆಯಿಂದ ವರ್ತಿಸುವುದು
೧೮. ತಪ್ಪು ಅಭಿಪ್ರಾಯಗಳನ್ನು ಸರಿಪಡಿಸಿಕೊಳ್ಳದೆ ಹೋಗುವುದಕ್ಕೆ ಬದಲಾಗಿ ಅವನ್ನೇ ಪೋಷಿಸುವ ಪ್ರಯತ್ನ ಮಾಡುವುದು
೧೯. ತನ್ನ ದೂರನ್ನು ತಾನೇ ಹೇಳುವುದಕ್ಕೆ ಬದಲಾಗಿ ಬೇರೆಯವರ ಮೂಲಕ ಹೇಳಿಸುವುದು

೨೦. ಗೆಳೆಯರಿಂದ ಅಗತ್ಯಕ್ಕಿಂತ ಹೆಚ್ಚು ಬಯಸುವುದು

ನಿಮ್ಮ ಗೆಳೆಯರ ಬಳಗ ಎಷ್ಟಿದೆ, ಹೇಗಿದೆ ಎಂಬ ಬಗ್ಗೆ ಈಗ ವಿಚಾರ ಮಾಡಿ. ನೀವು ಗೆಳೆಯರನ್ನೇನಾದರೂ ಕಳೆದುಕೊಂಡರೆ ಮೇಲ್ಕಂಡ ಕಾರಣಗಳು ಸಂಗತವೆ ಎಂಬ ವಿಷಯವಾಗಿ ಆಲೋಚಿಸಿ. ಒಳ್ಳೆಯ ಗೆಳೆಯರನ್ನು ಕೂಡಿಹಾಕಿ ಕೊಳ್ಳಬೇಕಾದರೆ ಏನು ಮಾಡಬೇಕು ಎಂಬ ವಿಚಾರ ಈಗಾಗಲೆ ನಿಮಗೆ ಹೊಳೆದಿರ ಬಹುದಲ್ಲವೆ !

ಸರಿಯಾದ ಸಂದರ್ಭ ದೊರಕದೆ ಹೋದಲ್ಲಿ ಏನು ಸಿಕ್ಕರೂ ಸರಿ, ಹವಾಮಾನ ವಾದರೂ ಸರಿ. ಅದರ ಮೇಲೆಯೆ ಸಿಟ್ಟು ಕಾರುತ್ತಾನೆ

ನನ್ನ ಈ ಮಾತುಗಳಿಂದ ಬಹುಶಃ ಮನುಷ್ಯನ ನಡೆವಳಿಕೆಗಳೆಲ್ಲ ಗ್ರಂಥಿ ಗಳಿಂದ ಹೊರಬೀಳುವ ರಸಗಳಿಗೆ ಅಧೀನವಾಗಿರುತ್ತವೆ ಎಂಬ ಅಭಿಪ್ರಾಯ ಬರಲೂ ಸಾಧ್ಯ. ಹಾಗಾದರೆ ಮನುಷ್ಯಮಾತ್ರನಾದವನಿಗೆ ತನ್ನದೇ ಆದ ಚಿಂತನೆ ಇತ್ಯಾದಿಗಳಿಲ್ಲವೆ ಎಂಬ ಅನುಮಾನ ಉಂಟಾಗಬಹುದು. ಆದರೆ ಮನುಷ್ಯನ ಚಟುವಟಿಕೆಗಳು ಗ್ರಂಥಿರಸಗಳಿಗೆ ತುಂಬ ಅಧೀನವಾಗಿರುವುದರಿಂದ ಕೋಪ ಸಹಜ ಪ್ರಕ್ರಿಯೆ ಎಂದು ನಾವು ಸುಮ್ಮನಿದ್ದುಬಿಡುವುದು ಹೇಗೆ ಎಂಬುದು ಇಲ್ಲಿಯ ಸಮಸ್ಯೆ. ಇದರಿಂದ ಬಚಾವಾಗುವ ಯಾವ ಮಾರ್ಗವೂ ಇಲ್ಲವೆ? ಇದೆ ಎಂಬುದು ನನ್ನ ಅಭಿಪ್ರಾಯ.

ನಮ್ಮ ಇಷ್ಟಕ್ಕಿಂತ ವಿರುದ್ಧವಾದ ಕೆಲಸ ನಡೆದರೆ ದೇಹದಲ್ಲಿರುವ ಗ್ರಂಥಿ ಗಳು ಹಾರ್ಮೋನನ್ನು ಸ್ರವಿಸುವುದು ಖಂಡಿತವಷ್ಟೆ. ಅದನ್ನು ತಡೆಯಲು ಸಾಧ್ಯ ವಾಗುವುದಿಲ್ಲ. ಈ ಸ್ರಾವಗಳನ್ನು ತಡೆಯಬೇಕಾದರೆ ಒಂದು ಉಪಾಯ ಉಂಟು —ನಾವೇ ನಮಗೆ ಇಷ್ಟವಾಗುವಂತಹ ವಿಷಯಗಳ ಪರಿಧಿಯನ್ನು ದೊಡ್ಡದು ಮಾಡಿಕೊಂಡುಬಿಟ್ಟರೆ ಸಾಕು. ಇಡೀ ಪ್ರಪಂಚ ನಮ್ಮ ಬಯಕೆಯಂತೆ ನಡೆಯುವ ಹಾಗೆ ನಾವು ಮಾಡುವುದು ಸಾಧ್ಯವಿಲ್ಲ. ನಿಜ, ಅದರ ಬದಲು ನಮ್ಮ ಇಷ್ಟಾನಿಷ್ಟ ಗಳನ್ನೇ ಮರುವಿಮರ್ಶೆ ಮಾಡಿಕೊಂಡರೆ ಹೇಗೆ? ನಾವು ಹೀಗೆ ಮಾಡಿದರೆ ಮಾತ್ರ ಈ 'ಚಟ' ಅಥವಾ 'ಪಿಡುಗು' ದೂರವಾಗಲು ಸಾಧ್ಯ. ಆದರೂ ನಮ್ಮ ಬದುಕಿನಲ್ಲಿ ಬರುವ ಅನೇಕ ಸಂದರ್ಭಗಳು ಹೇಗಿರುತ್ತವೆಂದರೆ ಈ ಸ್ರಾವವನ್ನು ತಡೆಯಲು ನಮಗೆ ಸಾಧ್ಯವಾಗುವುದಿಲ್ಲ. ಅಂಥ ಸಂದರ್ಭಗಳಲ್ಲಿ ಈ ಸ್ರಾವಗಳಿಂದ ನಮಗೆ ಅಪಕಾರ ಆಗದ ಹಾಗೆ ಉಪಕಾರ ಆಗುವ ಹಾಗೆ ಮಾಡುವುದು ಹೇಗೆ ಎಂಬುದರ ಕುರಿತು ಯೋಚನೆ ಮಾಡುವುದು ಆವಶ್ಯಕ.

ಇಂಥ ಸಂದರ್ಭಗಳಲ್ಲಿ ಇದನ್ನು ನಮ್ಮ ಗೆಳೆಯನನ್ನಾಗಿ ಮಾಡಿಕೊಳ್ಳ ಬೇಕು.

ಸ್ರಾವಗಳು ಹೆಚ್ಚಾಗಿ ಅವುಗಳ ನಿಮಿತ್ತವಾಗಿ ಹೊರಬೀಳುವ ಕೋಪ ಅತ್ಯಂತ ಪ್ರಚಂಡವಾದುದು ಎಂಬುದನ್ನು ನಾವು ಒಪ್ಪಿಕೊಂಡಿದ್ದೇವೆ. ಅದು ಅನಿವಾರ್ಯ ಎಂಬುದನ್ನು ಸಹ ಬಲ್ಲೆವು. ಅಂದಮೇಲೆ ಅದನ್ನು ಗೆಳೆಯನನ್ನಾಗಿ ಮಾಡಿಕೊಳ್ಳುವಲ್ಲಿ ತೊಡಕಾದರೂ ಏನು? ಈ ಭಾವನೆಯಲ್ಲಿ ಅಡಗಿರುವ ಶಕ್ತಿ ಯನ್ನು ಏಕೆ ಉಪಯುಕ್ತವಾಗಿ ಬಳಸಿಕೊಳ್ಳಬಾರದು?

ಕೋಪದ ಸಮಯದಲ್ಲಿ ಶಾಂತಿಯ ಸಮಯದಲ್ಲಿರುವುದಕ್ಕಿಂತ ಅನೇಕ
ಟ್ಟು ಹೆಚ್ಚು ಬಲಶಾಲಿಗಳಾಗುತ್ತೇವೆಂಬುದನ್ನು ಬಲ್ಲೆವು. ರಕ್ತಸಂಚಾರ ಶೀವ್ರ
ಾಗುತ್ತದೆ. ಅದರಲ್ಲಿ ಶರ್ಕರದ ಪ್ರಮಾಣ ಹೆಚ್ಚಾಗುವುದರಿಂದ ನಾವು ಹೆಚ್ಚು
ಲಶಾಲಿಗಳಾಗುತ್ತೇವೆ. ನಮಗಿಂತಲೂ ಹೆಚ್ಚು ಬಲಶಾಲಿಯಾದ ಪ್ರತಿದ್ವಂದ್ವಿ
ೂಡನೆ ಸೆಣಸಾಟಕ್ಕೆ ಇಳಿಯುತ್ತೇವೆ.

ನೀರಿನ ರಭಸಕ್ಕೆ ತಿರುಗುವ ಚಕ್ರಗಳನ್ನು ಉಪಯೋಗಿಸಿ ಜಲಶಕ್ತಿಯಿಂದ
ಯೋಜನ ಪಡೆದುಕೊಳ್ಳುತ್ತೇವೆ. ನೀರಿನಿಂದ ವಿದ್ಯುತ್ತನ್ನು ತಯಾರಿಸಿ
ೂಳ್ಳುವ ಕಲೆಯೂ ನಮಗೆ ಗೊತ್ತು. ಅಗ್ನಿಪರ್ವತಗಳಿಂದ ಸಹ ಪ್ರಯೋಜನ
ಡೆದುಕೊಳ್ಳುವ ವಿಧಾನವನ್ನು ನಾವು ಕಂಡುಕೊಂಡಿದ್ದೇವೆ. ಅಂದಮೇಲೆ
ೋಪದಿಂದ ಉತ್ಪನ್ನವಾಗುವ ಶಕ್ತಿಯನ್ನು ಯಾವುದೇ ಉಪಯೋಗದ ಕೆಲ
ಕ್ಕೆ ಬಳಸಲಾರವೆ ?

ಈ ಶಕ್ತಿ ನಮ್ಮನ್ನು ಮೇಲೆತ್ತುವಲ್ಲಿ ನೆರವಾಗುತ್ತದೆ. ರೋಪದೊಡನೆ
ೇತನ ಬೆಳೆಸಿ, ಆ ಶಕ್ತಿಯಿಂದ ಪ್ರಯೋಜನ ಪಡೆದುಕೊಂಡು ಅದರಿಂದಲೇ
ೂಡ್ಡವರಾಗಿ ಬೆಳೆದ ಅನೇಕ ಮಂದಿಯ ಉದಾಹರಣೆಗಳು ಉಂಟು. ಅಂಥ
ಂದೆರಡು ಉದಾಹರಣೆಗಳನ್ನು ಮುಂದೆ ನೋಡಬಹುದು.

ಮೊದಲನೆಯ ಉದಾಹರಣೆ ಮೆಟ್ರಿಕ್ ಪಾಸಾದ ಯುವಕ ಗಂಗಾರಾಮ
ನು. ಅವನು ಕೆಲಸ ಹುಡುಕುತ್ತಾ ಯಾವುದೋ ಒಂದು ಕಚೇರಿಗೆ ಬಂದ.
ಲ್ಲಿ ಇಂಜಿನಿಯರ್ ಕುರ್ಚಿ ಖಾಲಿಯಿತ್ತು. ಗೊತ್ತಿಲ್ಲದೆ ಅದರ ಮೇಲೆ ಕುಳಿತು
ಟ್ಟ. ಇಂಜಿನಿಯರ್ ಬಂದು ನೋಡುತ್ತಾನೆ, ಒಬ್ಬ ಸಾಧಾರಣ ಯುವಕ ತನ್ನ
ರ್ಚಿಯ ಮೇಲೆ ಆಸೀನನಾಗಿದ್ದಾನೆ. ಇಂಜಿನಿಯರ್ ಯುವಕನನ್ನು ಚೆನ್ನಾಗಿ
ೀಯಾಳಿಸಿ ಕುರ್ಚಿಯಿಂದ ಎಬ್ಬಿಸಿದ. ಯುವಕನಿಗೆ ತುಂಬ ಅವಮಾನವಾ
ಂತಾಯಿತು. ಅವನು ಆವೇಶಭರಿತನಾದ. ಕೋಪದಲ್ಲಿ ಅವನು ಇಂಜಿನಿಯರಿಗೆ
ಾಯಿಗೆ ಬಂದಂತೆ ಬೈಯತೊಡಗಿದನೆ ? ಇಲ್ಲ. ಅವನು ಆ ಆವೇಶದಲ್ಲಿಯೆ
ಣತೊಟ್ಟ. 'ನೀವು ನನ್ನನ್ನು ಅವಮಾನಮಾಡಿ ಯಾವ ಕುರ್ಚಿಯಿಂದ
ೇಲೆಬ್ಬಿಸಿದರೊ, ಒಂದು ದಿನ ಅದೇ ಕುರ್ಚಿಯ ಮೇಲೆ ನಾನು ಸಕಲ
ಾರ್ಯಾದೆಗಳೊಡನೆ ಕೂರುತ್ತೇನೆ.' ಇದೇ ಯುವಕ ಮುಂದೆ ದಾನವೀರ ಸರ್
ಗಾರಾಮ್ ಎಂಬ ಹೆಸರಿನಿಂದ ಪ್ರಖ್ಯಾತನಾದ.

ಚಾಣಕ್ಯನ ದೆಸೆಯಿಂದಾಗಿ ನಂದವಂಶ ನಿರ್ಮೂಲವಾದ ಘಟನೆ ತುಂಬ
ಳಿಯದು. ಈ ಕಾಲದ ಉದಾಹರಣೆಗಳನ್ನೇ ಕೊಡಬಹುದು. ಕರಿಯ ಮನುಷ್ಯ

ನೊಬ್ಬನನ್ನು ಬಿಳಿಯ ಮನುಷ್ಯ ಮೊದಲನೆಯ ದರ್ಜೆಯ ರೈಲು ಬೋಗಿಯಿಂದ ಅವಮಾನಪೂರ್ವಕವಾಗಿ ಹೊರಗೆ ದಬ್ಬುತ್ತಾನೆ. ಕರಿಯ ಮನುಷ್ಯನಲ್ಲಿ ರೋಷ ಉಕ್ಕುತ್ತದೆ. ಆದರೆ ಅವನು ತನ್ನ ರೋಷವನ್ನು ಅಪಶಬ್ದಗಳಲ್ಲಿ ಹೊರಗೆ ಹಾಕುವುದಿಲ್ಲ. ಇಡೀ ಬಿಳಿಯ ಜನಾಂಗವನ್ನೇ ತನ್ನ ರೋಷಕ್ಕೆ ಗುರಿಯಾಗಿಸಿಕೊಂಡು ಆಡಳಿತ ನಡೆಸುತ್ತಿದ್ದ ಅವರನ್ನು ಭಾರತದಿಂದಲೇ ಹೊರದೂಡುತ್ತಾನೆ. ಆ ಕಪ್ಪು ಮನುಷ್ಯನನ್ನೇ ನಾವು ರಾಷ್ಟ್ರಪಿತ ಮಹಾತ್ಮಾಗಾಂಧಿ ಎಂದು ಇಂದು ನೆನಪಿಸಿಕೊಳ್ಳುತ್ತೇವೆ.

ಚರಿತ್ರೆಯಲ್ಲಿ ಒಂದು-ಎರಡು-ಮೂರು-ನಾಲ್ಕು ಇಷ್ಟೇ ಅಲ್ಲ. ಈ ಬಗೆಯ ನೂರಾರು ಉದಾಹರಣೆಗಳು ನಮಗೆ ಕಾಣದೊರೆಯುತ್ತವೆ. ಚರಿತ್ರೆಯಲ್ಲಿ ಇರುವುದು ತಾನೆ ಏನು ? ತಮ್ಮ ಕೋಪದ ಶಕ್ತಿ ಸಂಚಯನವನ್ನು ಒಳ್ಳೆಯ ಅಥವಾ ವಿಧ್ವಂಸಕ ಕಾರ್ಯಗಳಿಗಾಗಿ ಬಳಸಿಕೊಂಡ ಜನರ ಕಥೆಗಳ ಸಂಗ್ರಹ-ರೂಪ ತಾನೆ ಅದು. ಈ ಶಕ್ತಿಯನ್ನು ಒಳ್ಳೆಯ ಕೆಲಸಗಳಿಗಾಗಿ ಬಳಸುವವರನ್ನು ಸಮಾಜ ಉತ್ಸಾಹಿ, ಜನೋಪಕಾರಿ ಎಂದೆಲ್ಲ ಕರೆಯುತ್ತದೆ. ವಿಧ್ವಂಸಕ ಕಾರ್ಯಗಳಿಗಾಗಿ ಬಳಸಿಕೊಳ್ಳುವವರನ್ನು ಕ್ರೂರಿ ಎಂದು ಹೆಸರಿಸುತ್ತದೆ ಅಷ್ಟೆ.

ಕೋಪ ತನ್ನಲ್ಲಿ ತಾನು ನಿಂದ್ಯವಲ್ಲ ಎಂಬುದನ್ನು ಸ್ಪಷ್ಟಪಡಿಸುವುದು ಮೇಲಿನ ಉದಾಹರಣೆಗಳ ಉದ್ದೇಶವಾಗಿತ್ತು. ಆದರೆ ಅದನ್ನು ತಪ್ಪಾಗಿ ಬಳಸುವುದು ಖಂಡಿತ ಸಲ್ಲದು. ಗೂಂಡಾ ಜನರ ಕೈಯಲ್ಲಿರುವ ಚಾಕು ಯಾರ ಪ್ರಾಣವನ್ನಾದರೂ ತೆಗೆಯಬಲ್ಲದು. ಅದೇ ಶಸ್ತ್ರಚಿಕಿತ್ಸೆ ನಡೆಸುವ ವೈದ್ಯನ ಕೈಯಲ್ಲಿರುವ ಚಾಕು ಒಬ್ಬ ವ್ಯಕ್ತಿಗೆ ಹೊಸ ಬದುಕನ್ನೇ ಕೊಡಬಲ್ಲದು. ಅಂದ ಮಾತ್ರಕ್ಕೆ ನಾವು ಚಾಕುವನ್ನು ಅವಹೇಳನ ಮಾಡೋಣವೆ ಅಥವಾ ಮೆಚ್ಚೋಣವೇ ?

ಕೋಪದ ಬಗೆಗೆ ಇಷ್ಟು ವಾಸ್ತವಾಂಶಗಳನ್ನು ತಿಳಿದುಕೊಂಡಮೇಲೆ ಅದನ್ನು ನಾವು ಹಳಿಯುವುದೆ ಅಥವಾ ಅದರೊಡನೆ ಗೆಳೆತನ ಬೆಳೆಸುವುದೆ ಎಂಬ ವಿಚಾರ ನಮಗೆ ಬಿಟ್ಟಿದ್ದು.

೮



# ಸೇಡು ಕೇವಲ ವಿನಾಶಕಾರಿ ಭಾವನೆಯೆ ?

೧

ಒಂದುವೇಳೆ ಯಾವುದೇ ಒಬ್ಬ ವ್ಯಕ್ತಿ ನಮಗೆ ತೊಂದರೆ ಉಂಟುಮಾಡಿದರೆ ಅವನಿಗೆ ಕೂಡ ಕೆಡಕು ಉಂಟುಮಾಡುವ ತೀವ್ರ ಬಯಕೆ ನಮ್ಮ ಮನಸ್ಸಿನಲ್ಲಿ ಏಳುತ್ತದೆ. ಈ ರೀತಿ ಇನ್ನೊಬ್ಬರಿಗೆ ಅವರು ಮಾಡಿದುದಕ್ಕೆ ಬದಲಾಗಿ ಅಹಿತವನ್ನು ಉಂಟುಮಾಡಲು ಪ್ರೇರಣೆ ನೀಡುವ ಭಾವನೆಗೆ ಸೇಡು ಅಥವಾ ಮುಯ್ಯಿ ಎನ್ನುತ್ತೇವೆ.

ಸೇಡಿನ ಹುಟ್ಟು ಅಡಗಿರುವುದು ಕೋಪದಲ್ಲಿ. ಆದರೆ ಇದರ ಬಿಸಿ ಕೋಪಕ್ಕಿಂತ ಮಿಗಿಲಾದುದು. ಕೋಪಗೊಂಡವನು ಆವೇಶದಿಂದ ಬುಸುಗುಟ್ಟುತ್ತಾನೆ. ಆದರೆ ಈ ಆವೇಶ ಕ್ಷಣಿಕ ಮಾತ್ರವಷ್ಟೆ. ಇದಕ್ಕೆ ಪ್ರತಿಯಾಗಿ ಸೇಡುತೀರಿಸಿ

ಕೊಳ್ಳುವವರಲ್ಲಿ ಧಾರಣಶಕ್ತಿ ಸಾಕಷ್ಟಿರುತ್ತದೆ. ಅವರು ಕೋಪ ಹೊರಬೀಳದಂತೆ ಹತ್ತಿಕ್ಕಬಲ್ಲರು. ಅವರ ಕೋಪದ ಒಳಸೆಲೆ ಸ್ಥಾಯಿಯಾದುದು. ಸಿಟ್ಟಿಗೆದ್ದಾಗ ಯಾವುದೇ ಜೀವಿ ಕೆಡುಕುಂಟುಮಾಡಲು ಮುಂದೆ ನುಗ್ಗುತ್ತದೆ, ಆದರೆ ಸಿಟ್ಟಿನ ಆವೇಶ ನೆತ್ತಿಯಿಂದ ಇಳಿದ ಮೇಲೆ ಪಶ್ಚಾತ್ತಾಪ ಆ ಜಾಗವನ್ನು ಆಕ್ರಮಿಸುತ್ತದೆ. ಆದರೆ ಸೇಡಿಗಾಗಿ ಹಾತೊರೆಯುವ ಜೀವ ಹೊರನೋಟಕ್ಕೆ ಆವೇಶದಿಂದ ಅಬ್ಬರಿಸುವುದಿಲ್ಲ. ಒಳಗೆ ಆಳವಾಗಿ ಕುಳಿತಿರುವ ಮುಯ್ಯಿನ ಭಾವನೆ ಕ್ಷಣಿಕವಾಗಿರುವುದಿಲ್ಲ. ತಾನು ಅಂದುಕೊಂಡ ರೀತಿಯಲ್ಲಿ ಸೇಡುತೀರಿಸಿಕೊಂಡು ಮುಗಿಸುವವರೆಗೆ ಆ ಭಾವನೆ ಸಕ್ರಿಯವಾಗಿ ವ್ಯಕ್ತಿಯಲ್ಲಿ ಜಾಗ್ರತವಾಗಿರುತ್ತದೆ. ಸೇಡಿಗೆ ಒಳಗಾದವನಲ್ಲಿ ದೈತ್ಯಸ್ವರೂಪದ ಏಕಾಗ್ರ ಶಕ್ತಿ ಇರುತ್ತದೆ. ಯಾರ ಮೇಲೆ ಸೇಡುತೀರಿಸಿಕೊಳ್ಳಬೇಕೊ ಅವರ ವಿಷಯದಲ್ಲಿ ಕೆಡುಕು ಉಂಟುಮಾಡಲು ಅವನ ಬುದ್ಧಿ ದಿಕ್ಸೂಚಿಯ ಮುಳ್ಳು ಉತ್ತರ ಧ್ರುವದ ಕಡೆ ತಿರುಗುವಂತೆಯೆ ಮೊನಚಾಗಿ ಕೆಲಸಮಾಡುತ್ತಿರುತ್ತದೆ. ಸೇಡು ತೀರಿಸಿಕೊಂಡಾಗ ಅವನ ಮನಸ್ಸಿಗೆ ದೊರಕುವಂತಹ ಶಾಂತಿಗೆ ಸಾಟಿಯೇ ಇರುವುದಿಲ್ಲ. ಪ್ರಾಯಃ ಸಾಲದ ಹೊರೆಯನ್ನು ತೀರಿಸಿ ಕೈತೊಳೆದುಕೊಂಡಾಗುವ ಮನಶ್ಶಾಂತಿಗೆ ಅದು ಸಮನಾಗಬಹುದೇನೊ. ಸಾಲ ಎಂಬ ಪದದ ಜೊತೆಯಲ್ಲಿ 'ತೀರಿಸು' ಎಂಬ ಪದ ಸೇರಿಕೊಳ್ಳುವಂತೆಯೇ ಸೇಡು ಎಂಬುದರ ಜೊತೆಯಲ್ಲಿ ಕೂಡ ಸೇರಿಕೊಳ್ಳುತ್ತದೆ. ಅದು ಬಹುಮಟ್ಟಿಗೆ ಕರ್ತವ್ಯದ ರೂಪವನ್ನು ತಳೆಯುತ್ತದೆ. ಅದರಿಂದಲೇ ಏನೋ, ತುಂಬ ಪ್ರಾಚೀನ ಕಾಲದಿಂದಲೂ ಸಾಲ ತೀರಿಸುವುದಕ್ಕೆ ಕೊಡುವಷ್ಟೇ ಮಹತ್ವವನ್ನು ಸೇಡುತೀರಿಸಿಕೊಳ್ಳುವುದಕ್ಕೆ ಕೂಡ ಕೊಡಲಾಗುತ್ತಿದೆ ಎನಿಸುತ್ತದೆ.

ಸೇಡಿನ ಭಾವನೆ ಬೇರೆ ಜೀವಿಗಳಿಗೆ ಹೋಲಿಸಿದಂತೆ ಮನುಷ್ಯನಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಅದು ಏಕೆಂದರೆ ಇತರ ಜೀವಿಗಳಲ್ಲಿ ಮನುಷ್ಯನಲ್ಲಿರುವಷ್ಟು ಧಾರಣಶಕ್ತಿ ಇರುವುದಿಲ್ಲ. ಇತರ ಜೀವಿಗಳು ಕೋಪಾವಿಷ್ಟವಾಗಬಹುದು. ಕೋಪದ ಭರದಲ್ಲಿ ಎದುರಿಗೆ ಇರುವವರಿಗೆ ತೊಂದರೆ ಇಲ್ಲವೆ ಅಪಾಯ ಉಂಟುಮಾಡಬಹುದು. ಆದರೆ ಎದುರೆದುರಿಗೆ ಅಪಕಾರಕ್ಕೆ ಬದಲಾಗಿ ಅಪಕಾರ ಉಂಟುಮಾಡುವುದನ್ನು 'ಸೇಡು' ಎಂದು ಕರೆಯಲಾಗದು. ಬಹಳ ದಿನಗಳ ಕಾಲ ಲೆಕ್ಕಾಚಾರ ಹಾಕಿ ಚುಕ್ತಾ ಮಾಡುವ ಕೋಪದ ಪ್ರತಿರೂಪವೇ ಸೇಡು. ಆದ್ದರಿಂದ ಯಾರಲ್ಲಿ ಧಾರಣಶಕ್ತಿ ಅಥವಾ ಅಡಗಿಸಿಟ್ಟುಕೊಳ್ಳುವ ಚೈತನ್ಯ ಪ್ರಬಲವಾಗಿರುತ್ತದೊ ಅಂತಹವರು ಮಾತ್ರ ಈ ಭಾವನೆಗೆ ಸಾಕಷ್ಟು ಕಾಲ ಹಾಲೆರೆದು ಕಾಪಾಡಿಕೊಂಡು ಬರಬಲ್ಲರು.

ಸೇಡಿನ ಭಾವನೆ ಮನುಷ್ಯ ಜಾತಿಯ ಪ್ರತಿಯೊಂದು ವರ್ಗದಲ್ಲೂ ಪ್ರತಿಯೊಂದು ಕಾಲದಲ್ಲೂ ಕಂಡುಬರುತ್ತಲೆ ಇದೆ.

ರಾಜಕೀಯ ಕ್ಷೇತ್ರವಾಗಲಿ ಸಾಮಾಜಿಕ ಕ್ಷೇತ್ರವಾಗಲಿ, ಔದ್ಯೋಗಿಕ ಇಲ್ಲವೆ ಧಾರ್ಮಿಕ ಯಾವುದೇ ರಂಗವಾಗಲಿ, ಅಪರಾಧ ಇಲ್ಲವೆ ಪ್ರಣಯ ಯಾವುದಕ್ಕೇ ಸಂಬಂಧಪಟ್ಟ ವಿಚಾರವಾಗಲಿ ಪ್ರತಿಯೊಂದು ಎಡೆಯಲ್ಲೂ ಈ ಭಾವನೆ ಅವಶ್ಯವಾಗಿ ಕಂಡುಬರುತ್ತದೆ. ಸಮಾಜದಲ್ಲಿ ಎಲ್ಲಿಯವರೆಗೆ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನಿಗೆ ಯಾವುದೇ ಪ್ರಮಾಣದಲ್ಲಿಯೆ ಆಗಲಿ ಕೇಡನ್ನು ಬಯಸುತ್ತಿರುವನೋ, ಅಲ್ಲಿಯವರೆಗೆ ಈ ಭಾವನೆಗೆ ಸಾವಿಲ್ಲ.

ಎಲ್ಲ ಮನುಷ್ಯರಲ್ಲೂ ಈ ಭಾವನೆ ಇರುವುದು ನಿಜವೇ ಆದರೂ ಎಲ್ಲರಲ್ಲೂ ಒಂದೇ ಸಮನಾಗಿರುವುದಿಲ್ಲ. ಈ ಭಾವನೆಯ ತೆಕ್ಕೆಗೆ ಅತಿ ಹೆಚ್ಚಾಗಿ ಬೀಳುವವರಲ್ಲಿ ಇದು ಅಪಾರವಾಗಿ ಮೇಲುಗೈ ಸಾಧಿಸಿ ಉಳಿದ ಭಾವನೆಗಳನ್ನು ಹತ್ತಿಕ್ಕಿಬಿಡುತ್ತದೆ. ಇಂಥ ಜನ ಯಾವಾಗಲೂ ಬದುಕಿರುವ ಅಥವಾ ಜೀವ ಇಲ್ಲದಿರುವ ಎಲ್ಲದರ ಮೇಲೂ ಸೇಡು ತೀರಿಸಿಕೊಳ್ಳಲು ಹಾತೊರೆಯುತ್ತಿರುತ್ತಾರೆ.

ಸೇಡು ತೀರಿಸಿಕೊಳ್ಳುವುದಕ್ಕೆ ಪಕ್ಕಾಗುವ ಅಭ್ಯಾಸಕ್ಕೆ ಪ್ರೇರಣೆ ಎಳೆತನದಿಂದಲೇ ದೊರೆಯತೊಡಗುತ್ತದೆ. ತನ್ನ ಸ್ವಂತ ಹಿತವನ್ನು ರಕ್ಷಿಸಿಕೊಳ್ಳುವುದರಲ್ಲಿ ತೀವ್ರವಾಗಿ ಎಚ್ಚರಿಕೆ ವಹಿಸುವ ಗುಣ ಈ ಅಭ್ಯಾಸಕ್ಕೆ ಪ್ರೇರಣೆ ಒದಗಿಸುತ್ತದೆ. ಈ ರೀತಿ ಅತಿಯಾಗಿ ಕಾಳಜಿ ವಹಿಸುವ ಮನುಷ್ಯನಿಗೆ ತನಗೆ ಯಾವಾಗಲೂ ಬೇರೆಯವರು ತೊಂದರೆಯುಂಟುಮಾಡುತ್ತಿದ್ದಾರೆಂದೆ ಅನಿಸುತ್ತಿರುತ್ತದೆ. ಅವನು ಆಲೋಚಿಸುವ ಅರ್ಥಮಾಡಿಕೊಳ್ಳುವ ರೀತಿ ಸಾಮಾಜಿಕವಾಗಿರದೆ ವೈಯಕ್ತಿಕವಾಗಿರುತ್ತದೆ. ಸ್ವಂತ ಹಿತಚಿಂತನೆಗೆ ಮುಡಿಪಾಗುವ ಈ ಭಾವನೆ ಯಾವುದೇ ವ್ಯಕ್ತಿ ಸೇಡಿಗಾಗಿ ಹಾತೊರೆಯುವಂತೆ ಮಾಡಲು ಸಾಕು.

ಸೇಡಿನ ಈ ಭಾವನೆ ಸುಸಂಸ್ಕೃತವೆಂದು ಕರೆಸಿಕೊಳ್ಳುವ ಸಮಾಜದಲ್ಲಿ ಎಷ್ಟು ನಿಂದೆಗೆ ಒಳಗಾಗಿದೆಯೊ, ಅನಾಗರಿಕ ಸಮಾಜಗಳಲ್ಲಿ ಅಷ್ಟೇ ಹೊಗಳಿಕೆಗೆ ಪಾತ್ರವಾಗಿದೆ. ಆದಿವಾಸಿ ಜನಾಂಗಗಳಲ್ಲಿ ಒಬ್ಬ ಮನುಷ್ಯ ಸರಿಯಾಗಿ ಸೇಡು ತೀರಿಸಿಕೊಳ್ಳದೆ ಹೋದರೆ ಅದು ಅವನ ಗಂಡಸುತನಕ್ಕೇ ಸವಾಲಾಗಿ ಪರಿಣಮಿಸುತ್ತದೆ. ಸೇಡಿಗೆ ಅಲ್ಲಿ ಸಾಮಾಜಿಕ ಮನ್ನಣೆ ಉಂಟು. ಸೇಡು ಅಲ್ಲಿ ತಲೆಮಾರಿನಿಂದ ತಲೆಮಾರಿಗೆ ರವಾನೆಯಾಗುತ್ತದೆ. ಒಂದುವೇಳೆ ಇಂಥ ಅಶಿಕ್ಷಿತ ಸಮಾಜಗಳಲ್ಲಿ ಸೇಡಿನ ಭಾವನೆಯನ್ನು ಪೂರ್ತಿ ತೊಡೆದುಹಾಕಿಬಿಟ್ಟರೆ ಸ್ವಲ್ಪಕಾಲದವರೆಗಾದರೂ ಆ ಜನಗಳಿಗೆ ಹೊತ್ತು ಕಳೆಯುವುದು ಹೇಗೆ ಎನ್ನುವುದು ದೊಡ್ಡ ಸಮಸ್ಯೆಯಾಗುತ್ತದೇನೊ !

೨

ಸೇಡಿನ ಭಾವನೆಗೆ ಅಪಕೀರ್ತಿ ಮತ್ತು ಕಳಂಕ ಹಚ್ಚುವುದರಲ್ಲಿ ನಾಗರಿಕ ಸಮಾಜದ ಪಾತ್ರ ಅಧಿಕ. ಆದರೆ ಸೇಡು ಸಮಾಜಕ್ಕೆ ಎಷ್ಟು ಬಗೆಯಲ್ಲಿ ಉಪಕಾರ ಮಾಡಿದೆ ಎಂದು ಸ್ವಲ್ಪವಾದರೂ ಸ್ಮರಿಸಿಕೊಳ್ಳುವ ಆವಶ್ಯಕತೆಯೆ ಇವರಿಗೆ ಕಂಡುಬರಲಿಲ್ಲವೇನೊ. ದುರ್ಬಲನಾಗಿರುವವನನ್ನು ಬಲಶಾಲಿಯಾದವನ ಕೈಯಿಂದ ಉಳಿಸಲು ಯಾವುದೇ ಮಾರ್ಗ ಕಾಣದಿರುವ ಸಮಾಜವೊಂದನ್ನು ಒಂದು ಕ್ಷಣ ಕಲ್ಪಿಸಿಕೊಳ್ಳಿ. ಅಲ್ಲಿ ಬಲಶಾಲಿ ಅಪರಾಧ ಮಾಡುವುದನ್ನು ತಡೆಯಬಲ್ಲವರಾರು ? ಅಂಥ ಸಮಯದಲ್ಲಿ ಆ ಬಲಶಾಲಿ ಹೆದರಿ ಬಲಪ್ರಯೋಗ ಮಾಡದೆ ಇರುವಂತಹ ಯಾವುದಾದರೂ ಬಗೆಯ ಭಯದ ತುರ್ತು ಆವಶ್ಯಕತೆ ಉಂಟಾಗುತ್ತದೆ. ಸಾಧನ ಸಂಪತ್ತುಗಳನ್ನು ಉಳ್ಳವರು ಅವುಗಳನ್ನು ಹೊಂದದೆ ಇರುವವರ ಮೇಲೆ ನಡೆಸಬಹುದಾದ ಅತ್ಯಾಚಾರಗಳನ್ನು ತಡೆಗಟ್ಟುವಲ್ಲಿ 'ಸೇಡು' ಒಂದು ಅಸಾಧಾರಣವಾದ ಸಾಧನವೆನಿಸಿದೆ. ಯಾರಾದರೂ ವಿಪರೀತ ಬಲಶಾಲಿಗಳಾಗಿದ್ದರೆ ಅಂಥವರು ಇನ್ನೊಬ್ಬ ಶಕ್ತಿಶಾಲಿಯ ಕಲ್ಪನೆಯಿಂದಲೇ ಭಯಗ್ರಸ್ತರಾಗಬಲ್ಲರು. ಒಂದುವೇಳೆ ಅವರ ಎದುರು ಇಂಥ ಬೇರೊಬ್ಬ ಬಲಶಾಲಿ ಇಲ್ಲದಿದ್ದಲ್ಲಿ ಸಾಧನಸಂಪತ್ತುಗಳನ್ನು ಹೊಂದದೆ ಇರುವವರು ಯಾರಾದರೂ ಒಬ್ಬ ಮಹಾ ಬಲಶಾಲಿಯನ್ನು ಅವರ ಮುಂದೊಡ್ಡಿ ಪಿಡುಗಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇಷ್ಟರ ಮೇಲೂ ಆ ಶಕ್ತಿಶಾಲಿ ತನ್ನ ಸಾಧನಸಂಪತ್ತುಗಳ ನೆರವಿನಿಂದ ದುರ್ಬಲರನ್ನು ಶೋಷಣೆಗೆ ಒಳಪಡಿಸುತ್ತಲೆ ಹೋದರೆ, ಆಗ ಕಾಲಾನಂತರದಲ್ಲಿ ಆ ಮಂದಿ ಸಂಘಟಿತರಾಗಿ ತಲೆಮಾರುಗಳಿಂದ ತಾವು ಒಳಗಾದ ಶೋಷಣೆಯನ್ನು ವಿರೋಧಿಸಿ ಸೆಟೆದುನಿಂತು ಉಳ್ಳವರ ವಿರುದ್ಧ ಸೇಡು ತೀರಿಸಿಕೊಳ್ಳುತ್ತಾರೆ. ಅಂಥ ವೇಳೆಯಲ್ಲಿ ಸೇಡಿಗೆ 'ಬಂಡಾಯ' ಎಂಬ ಹಣೆಪಟ್ಟಿ ಅಂಟಿಕೊಳ್ಳುತ್ತದೆ.

ಪ್ರತಿಯೊಂದು ಯುಗದಲ್ಲೂ ಸೇಡು ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಹೋಗುತ್ತದೆ. ಮಾನವ ತಾನು ನಾಗರಿಕತೆಯ ಮುಸೆಯಲ್ಲಿ ಅಚ್ಚೊತ್ತಿಸಿಕೊಳ್ಳುತ್ತಾ ಹೋಗುತ್ತಿದ್ದಂತೆಯೆ, ಸೇಡಿಗೆ ಕೂಡ ನಾಗರಿಕವಾದ ರೂಪವನ್ನು ಕೊಡಲಾರಂಭಿಸಿದ. ಈ ರೂಪವನ್ನು ಅರ್ಥಮಾಡಿಕೊಳ್ಳಬೇಕಾದರೆ ಮಾನವಕುಲ ನಡೆದುಬಂದ ದಾರಿಯ ಬಗೆಗೆ ನಾಲ್ಕು ಮಾತುಗಳನ್ನು ಬರೆಯುವುದು ಉಚಿತವಾದೀತು.

ಬುಡಕಟ್ಟುಗಳು ನಾಗರಿಕ ಸಮಾಜದ ಲಕ್ಷಣಗಳನ್ನು ಪಡೆಯುತ್ತಿದ್ದಂತೆಯೆ ಾಜನ ಆಡಳಿತವುಳ್ಳ ಶಾಸನ ವ್ಯವಸ್ಥೆ ಅಸ್ತಿತ್ವಕ್ಕೆ ಬಂತು. ಈ ವ್ಯವಸ್ಥೆ ಪ್ರಜೆ ಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ತನ್ನ ಹೆಗಲಮೇಲೇರಿಸಿಕೊಂಡಿತು. ಹೊಡೆ ದಾಟ ಯುದ್ಧಗಳ ಭಯದಿಂದ ಸಾಮಾನ್ಯ ಜನತೆಗೆ ಸ್ವಲ್ಪ ನೆಮ್ಮದಿ ದೊರೆ ಯಿತು. ಇದರಿಂದ ಶಾರೀರಿಕ ಬಲದ ಮಹತ್ವ ಕಡಮೆಯಾಯಿತು. ಬುದ್ಧಿಬಲ ಮತ್ತು ಹಣಬಲಗಳಿಗೆ ಹೆಚ್ಚು ಪ್ರಾಶಸ್ತ್ಯ ದೊರೆಯಲಾರಂಭಿಸಿತು. ಬುದ್ಧಿ ಮತ್ತು ಹಣಬಲವುಳ್ಳವರ ಕೈಗೆ ಅಧಿಕಾರ ಬಂದು ಸೇರಿತು. ನಾಡಿನಲ್ಲಿ ಆಡಳಿತ ವ್ಯವಸ್ಥೆ ಸುಸೂತ್ರವಾಗಿರಬೇಕಾದರೆ ಸೇಡು ಆವಶ್ಯಕವೆಂಬುದನ್ನು ಈ ಅಧಿಕಾರಾ ರೂಢರು ಮನಗಂಡರು. ಆದರೆ ಪ್ರತಿಯೊಬ್ಬ ವ್ಯಕ್ತಿಗೂ ಸೇಡು ತೀರಿಸಿಕೊಳ್ಳಲು ಅಧಿಕಾರ ನೀಡಿದರೆ ಸೇಡಿನ ಅಭ್ಯಾಸಕ್ಕೆ ತುತ್ತಾದ ಮನುಷ್ಯ ಅನುಚಿತವಾದ ರೀತಿಯಲ್ಲಿ ಸೇಡು ತೀರಿಸಿಕೊಳ್ಳಬಹುದೆಂಬ ಅನುಮಾನ ಸಹ ಅವರಲ್ಲಿ ಮೂಡಿತು. ಹಾಗಾಗಿ ಪ್ರಜೆಗಳ ಯೋಗಕ್ಷೇಮದ ಜವಾಬ್ದಾರಿ ಹೊತ್ತವರೇ ಸೇಡುತೀರಿಸಿಕೊಳ್ಳುವ ಹೊಣೆಯನ್ನೂ ಹೊತ್ತರು. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಅಪಕಾರ ಉಂಟಾದರೆ ಅದರ ಪೂರ್ಣ ವಿವರಗಳನ್ನು ಆಡಳಿತದ ಜವಾ ಬ್ದಾರಿ ಹೊತ್ತವರಿಗೆ ನೀಡಬೇಕೆಂದೂ ಹಾಗೂ ಅವರು ತಮಗೆ ಉಚಿತವೆನಿಸಿದ ರೀತಿಯಲ್ಲಿ ತೊಂದರೆಗೊಳಗಾದವನ ಪರವಾಗಿ ತೊಂದರೆ ಮಾಡಿದವನಿಗೆ ಅಪಕಾರ ಉಂಟುಮಾಡತಕ್ಕದ್ದೆಂದೂ ತೀರ್ಮಾನಿಸಲಾಯಿತು. ಸೇಡು ತೀರಿಸಿಕೊಳ್ಳುವ ಈ ಹೊಸ ರಾಷ್ಟ್ರೀಯ ರೂಪಕ್ಕೆ 'ದಂಡ' ಅಥವಾ 'ಶಿಕ್ಷೆ' ಎಂದು ಹೆಸರಿಸ ಲಾಯಿತು.

ಅಪಕಾರಕ್ಕೆ ಇಲ್ಲವೆ ತೊಂದರೆಗ ಒಳಗಾದವರ ಮನಸ್ಸಿಗೆ ಸ್ವಲ್ಪ ಸಮಾ ಧಾನ ಸಿಕ್ಕಲಿ ಎಂಬುದು ಈ ದಂಡವ್ಯವಸ್ಥೆಯ ಒಂದು ಗುರಿಯಾಗಿತ್ತು. ಇನ್ನೊಂದು ಉದ್ದೇಶ ಯಾರು ಈವರೆಗೆ ಅಪರಾಧಗಳಲ್ಲಿ ಭಾಗಿಗಳಾಗಿಲ್ಲವೊ ಅಂಥವರು ಇನ್ನು ಮುಂದೆ ಸಹ ಶಿಕ್ಷೆಯ ಭಯದಿಂದಾಗಿ ಅಪರಾಧ ಮಾಡದಿರಲಿ ಎಂಬುದಾಗಿತ್ತು.

ಈ ವ್ಯವಸ್ಥೆ ಇಂದಿಗೂ ಚಾಲ್ತಿಯಲ್ಲಿದೆ. ಆದರೆ ಕೆಲವು ಮಂದಿ ತಮ್ಮ ಸೇಡಿನ ವಿಚಾರವನ್ನು ಸರ್ಕಾರಕ್ಕೆ ಒಪ್ಪಿಸಲು ಇಷ್ಟಪಡುವುದಿಲ್ಲ. ಸರಕಾರದಿಂದ ನ್ಯಾಯ ದೊರಕುವಲ್ಲಿ ಉಂಟಾಗಬಹುದಾದ ವಿಳಂಬದ ದೆಸೆಯಿಂದಾಗಿ ಅವರು ಕಾಗೆ ಮಾಡಬಯಸುವುದಿಲ್ಲ. ಇಲ್ಲವೆ ಕಾನೂನಿನ ದೃಷ್ಟಿಯಿಂದ ತೊಂದರೆ ಉಂಟುಮಾಡಿದವನನ್ನು ಅಪರಾಧಿ ಎಂದು ಸಾಬೀತು ಪಡಿಸಲು ಸಾಧ್ಯವಾಗ

ಲಾರದು ಎಂಬ ಕಾರಣದಿಂದ ಅವರು ಹಿಂದೆಗೆಯುತ್ತಾರೆ. ಬಹಳ ಕಾಲದವರೆಗೆ ಸೇಡಿನ ಬೆಂಕಿಯಲ್ಲಿ ಬೇಯುವುದರ ಬದಲಾಗಿ ಅವರು ತಾವೇ ಸ್ವತಃ ಸೇಡು ತೀರಿಸಿಕೊಳ್ಳಲು ಮುನ್ನುಗ್ಗುತ್ತಾರೆ. ಆದರೆ ಅವರ ಇಂಥ ಕೃತ್ಯದಿಂದಾಗಿ ಸರಕಾರ ತನ್ನ ಪ್ರತಿಷ್ಠೆಗೆ ಪೆಟ್ಟುಬಿದ್ದಿತೆಂದು ಭಾವಿಸುತ್ತದೆ. ಅಂಥವರನ್ನು ನೋಡಿ ಉಳಿದವರು ಕೂಡ ತಮ್ಮ ಮನಸ್ಸಿಗೆ ಬಂದಂತೆ ಸೇಡು ತೀರಿಸಿಕೊಳ್ಳತೊಡಗಿದರೆ ಅನರ್ಥವಾದೀತೆಂದು ಸರಕಾರ ತನ್ನ ಕಾನೂನುಪಾಲನೆಯ ಮೇಲೆನಂಬಿಕೆ ಇಡದವರನ್ನು ಕೂಡ ಶಿಕ್ಷೆಗೆ ಗುರಿಪಡಿಸುತ್ತದೆ. ಕೆಲವೊಮ್ಮೆ ತನ್ನ ಮನಸ್ಸಿಗೆ ಬಂದಂತೆ ಸೇಡು ತೀರಿಸಿಕೊಳ್ಳುವ ವ್ಯಕ್ತಿ ತನಗೆ ಎಂಥ ಶಾಂತಿ ದೊರಕಿದೆಯೆಂದು ಭಾವಿಸುತ್ತಾನೆಂದರೆ ಆದರ ಮುಂದೆ ಸರಕಾರ ನೀಡಬಹುದಾದ ಶಿಕ್ಷೆ ಅವನ ಪಾಲಿಗೆ ಕ್ಷುಲ್ಲಕ ಎನಿಸುತ್ತದೆ. ಸರಿಯಾದ ರೀತಿಯಲ್ಲಿ ಭರ್ಜರಿಯಾಗಿ ಸೇಡನ್ನು ತೀರಿಸಿಕೊಂಡ ಆನಂದದ ಅನುಭವ ಪಡೆಯುವುದರಲ್ಲಿ ಅವನಿಗೆ ಬೇರಾವುದೂ ಕಷ್ಟವೆನಿಸುವುದಿಲ್ಲ.

ಸರಕಾರ ಕೆಲವು ಸಂದರ್ಭಗಳಲ್ಲಿ ಉಚಿತ-ಅನುಚಿತಗಳ ವಿಚಾರವಾಗಿ ಸರಿಯಾಗಿ ತೀರ್ಮಾನ ಕೈಗೊಳ್ಳದೆ ಹೋದಾಗ ಅಂದರೆ ಅಪರಾಧ ಮಾಡಿ ಶಿಕ್ಷೆಗೆ ಗುರಿಯಾಗಬೇಕಾದ ವ್ಯಕ್ತಿ ತನ್ನ ಯಾವುದಾದರೂ ಸಾಧನಸಂಪತ್ತುಗಳ ಕಾರಣದಿಂದ ಬಚಾವಾಗಿ ನಿರಪರಾಧಿ ಶಿಕ್ಷೆ ಅನುಭವಿಸಬೇಕಾಗುವಂತಹ ಪರಿಸ್ಥಿತಿ ಒದಗಿಬಂದಾಗ ಇಂಥ ಕಾನೂನು ವ್ಯವಸ್ಥೆ ಅತೃಪ್ತಿ ಅಸಂತೋಷಗಳಿಗೆ ದಾರಿಮಾಡಿಕೊಡುತ್ತದೆ. ಉಳ್ಳವರು ನಿರ್ಭಯವಾಗಿ ಸಾಮಾಜಿಕ ಅಹಿತವನ್ನು (ಅಪರಾಧ) ಮಾಡುತ್ತಾ ಹೋದಂತೆಲ್ಲ ಅಸಂತುಷ್ಟ ಜನರ ಸಂಖ್ಯೆ ಏರುತ್ತಾ ಹೋಗುತ್ತದೆ. ಅಂಥ ಅತೃಪ್ತ ಜನ ಸರಕಾರಕ್ಕೆ ತಾವು ನೀಡಿದ ಅಧಿಕಾರವನ್ನು ಅದು ದುರುಪಯೋಗಪಡಿಸಿಕೊಂಡ ಕಾರಣ ಅದರ ವಿರುದ್ಧವಾಗಿ ಸೇಡುತೀರಿಸಿಕೊಳ್ಳಲು ತುದಿಗಾಲಲ್ಲಿ ನಿಲ್ಲುತ್ತಾರೆ. ಅಂಥ ಪರಿಸ್ಥಿತಿಯಲ್ಲಿ ಒಂದು ವೇಳೆ ಆ ಜನತೆಗೆ ದೃಢಮನಸ್ಕನಾದ ಯಾವುದಾದರೂ ಸಶಕ್ತ ವ್ಯಕ್ತಿಯ ಮುಂದಾಳುತನ ದೊರೆತಲ್ಲಿ ಸರಕಾರ ಉರುಳುವುದಕ್ಕೆ ಹೆಚ್ಚುಕಾಲ ಬೇಕಾಗುವುದಿಲ್ಲ. ಈ ಬಗೆಯ ಸಾಮೂಹಿಕ ಸೇಡಿಗೆ 'ಕ್ರಾಂತಿ' ಎಂದು ಕರೆಯುತ್ತಾರೆ.

ಕೆಲವು ವೇಳೆ ಸರಕಾರ ಬಯಸಿದರೂ ಉಚಿತವಾದ ಶಿಕ್ಷೆಯನ್ನು ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ. ವಿದ್ಯಾಭ್ಯಾಸ ವ್ಯಾಪಕವಾಗುತ್ತಿರುವಂತೆಯೆ ಈ ಬಗೆಯ ಅಸಹಾಯಕತೆ ಕೂಡ ಹೆಚ್ಚುತ್ತಿದೆ. ನಾವು ಯಾವುದನ್ನು ಏಳಿಗೆ ಎಂದು ಕರೆಯುತ್ತೇವೆಯೊ ಅದರತ್ತ ಮುಂದುವರಿದಂತೆಲ್ಲ ನಮ್ಮ ಮನೋವಿಕೃತಿ

ಗಳನ್ನು ಪ್ರತ್ಯಕ್ಷವಾಗಿ ಹೊರಗೆಡವದೆ ಅವನ್ನು ಕ್ಲಿಷ್ಟಗೊಳಿಸುತ್ತಾ ಹೋಗು ತ್ತಿದ್ದೇವೆ. ಆದರೆ ವಾಸ್ತವವಾಗಿ ಸೇಡಿನ ಭಾವನೆಯನ್ನು ಹತ್ತಿಕ್ಕುವಷ್ಟು ಎತ್ತರ ವಾಗಿ ನಾವು ಇನ್ನೂ ಬೆಳೆದಿಲ್ಲ. ಅದಕ್ಕೆ ಬದಲಾಗಿ ನಾವು ಎಷ್ಟು ಚೆನ್ನಾಗಿ ಕ್ರಿಯಾ ಶೀಲರಾಗುತ್ತೇವೆಂದರೆ ನಮಗೆ ತೊಂದರೆ ಉಂಟುಮಾಡಿದವರ ವಿರುದ್ಧ ಮುಯ್ಯಿ ತೀರಬೇಕು, ಏಟಿಗೆ ಎದಿರೇಟು ಹಾಕುವುದರಲ್ಲಿ ನಾವು ಯಶಸ್ವಿಗಳಾಗಬೇಕು. ಆದರೆ ಸರಕಾರ ಅಥವಾ ಸಮಾಜಕ್ಕೆ ಈ ಬಗೆಗೆ ಯಾವ ಸುಳಿವೂ ದೊರೆಯ ಬಾರದು.

೩

ಈ ಕಾಲದಲ್ಲಿ 'ಪ್ರಾಣಕ್ಕೆ ಬದಲಾಗಿ ಪ್ರಾಣ' ಎಂಬ ರೀತಿಯ ಸೇಡು ಕೇವಲ ಅಪರಾಧಿಗಳ ಪ್ರಪಂಚದಲ್ಲಿ ಅಸ್ತಿತ್ವದಲ್ಲಿದೆ. ನಾಗರಿಕ ಸಮಾಜದಲ್ಲಿ ಮನಸ್ಸಿಗೆ ಹಿಂಸೆ ಕೊಟ್ಟು ಇನ್ನೊಬ್ಬರಿಗೆ ತೊಂದರೆ ಅಥವಾ ಕಿರುಕುಳ ಉಂಟು ಮಾಡಲಾಗುತ್ತದೆ. ಹಾಗೂ ಅದೇ ರೀತಿಯಲ್ಲಿ ಮಾನಸಿಕ ಹಿಂಸೆಯ ಮೂಲಕವೇ ಸೇಡು ತೀರಿಸಿಕೊಳ್ಳಲಾಗುತ್ತದೆ.

ಒಬ್ಬ ಮನುಷ್ಯ ಒಂದುವೇಳೆ ತನ್ನ ಕಾರ್ಯಕ್ಷೇತ್ರದಲ್ಲಿ ವಿಫಲವಾದರೆ, ಅದೇ ಕ್ಷೇತ್ರದಲ್ಲಿ ಇನ್ನೊಬ್ಬ ಯಶಸ್ಸಿನ ಮೆಟ್ಟಲುಗಳನ್ನು ಹತ್ತತೊಡಗಿದನೆಂದರೆ ಅವನಿಗೆ ತುಂಬ ದುಃಖ ಉಂಟಾಗುತ್ತದೆ. ಈ ಬಗೆಯ ದುಃಖಕ್ಕೆ ಈರ್ಷ್ಯೆ, ಅಸೂಯೆ ಇಲ್ಲವೆ ಹೊಟ್ಟೆಕಿಚ್ಚು ಎಂದು ಹೆಸರು. ತನ್ನ ಸೋಲಿಗೆ ಆ ಯಶಸ್ವಿ ಯಾದ ವ್ಯಕ್ತಿ ಕಾರಣವೆಂದು ಅವನು ಭಾವಿಸಿದನೆಂದರೆ ಆ ವ್ಯಕ್ತಿಯ ಕಾಲು ಎಳೆದು ಬೀಳಿಸಲು ಪ್ರಯತ್ನಿಸಿ ಸೇಡು ತೀರಿಸಿಕೊಳ್ಳುತ್ತಾನೆ. (ಇದರಲ್ಲಿ ಪಾಪ ಆ ಯಶಸ್ವಿ ವ್ಯಕ್ತಿಯ ಪಾತ್ರ ಏನೂ ಇಲ್ಲದಿದ್ದರೂ ಪರವಾಗಿಲ್ಲ!)

ಈಗ ನಾವು ನಮ್ಮ ಅನುಕೂಲಕ್ಕೋಸ್ಕರ ಸೇಡಿನ ಎರಡು ರೂಪಗಳಿಗೆ ಬೇರೆ ಬೇರೆ ಹೆಸರುಗಳನ್ನು ಇಡೋಣ. ಒಂದನ್ನು 'ಆವೇಶ ಪ್ರಧಾನವಾದ' ಸೇಡು ಎನ್ನೋಣ ಹಾಗೂ ಇನ್ನೊಂದನ್ನು 'ಈರ್ಷ್ಯಾ ಪ್ರಧಾನವಾದ' ಸೇಡು ಎನ್ನೋಣ. ಹಾಗೆಯೆ ಸೇಡಿನಂತೆಯೆ ಹೊಟ್ಟೆಕಿಚ್ಚು ಸಹ ಕೋಪದಿಂದ ಹುಟ್ಟಿದ ಭಾವನೆಯೊಂದೆಂದು ನಾವು ಮರೆಯಬಾರದು. ಆದರೆ ಈ ಭಾವನೆ ಯಲ್ಲಿ ಕ್ರಿಯಾಶೀಲತೆಗಿಂತಲೂ ಅಕರ್ಮಣ್ಯತೆಯ ಪ್ರಮಾಣ ಹೆಚ್ಚಾಗಿರುತ್ತದೆ. ಹೊರಗೆ ಏನೂ ಕ್ರಿಯಾಶೀಲವಾಗಿ ತೋರಿಸದೆ ಒಳಗೊಳಗೆ ಕುದಿಯುವುದು ಸಹಜಕ್ಕೂ ಹೊಟ್ಟೆಕಿಚ್ಚಿನ ಪ್ರಧಾನ ಲಕ್ಷಣ. ಸೇಡು ಒಂದು ಕರ್ಮಪ್ರಧಾನವಾದ

ಭಾವ. ಕೋಪದ ಇವೆರಡು ರೂಪಗಳು ಒಟ್ಟು ಸೇರಿದಾಗ ಒಂದು ಇನ್ನೊಂದರ ಗುಣಲಕ್ಷಣಗಳನ್ನು ಗ್ರಹಿಸಿಬಿಡುತ್ತದೆ. ಸೇಡಿನ ಕ್ರಿಯಾತತ್ಪರತೆಯನ್ನು ಕಂಡು ಹೊಟ್ಟೆಕಿಚ್ಚು ಸ್ವಲ್ಪಮಟ್ಟಿಗೆ ಕಾರ್ಯೋನ್ಮುಖವಾಗುತ್ತದೆ ಹಾಗೂ ಹೊಟ್ಟೆ-ಕಿಚ್ಚಿನ ಅಕರ್ಮಣ್ಯತೆಯ ದೆಸೆಯಿಂದಾಗಿ ಸೇಡು ಕೆಲಮಟ್ಟಿಗೆ ಅಂತರ್ಮುಖಿಯಾಗುತ್ತದೆ.

'ಆವೇಶ ಪ್ರಧಾನವಾದ' ಹಾಗೂ 'ಈರ್ಷ್ಯಾ ಪ್ರಧಾನವಾದ' ಸೇಡಿನ ಪ್ರಕಾರಗಳಲ್ಲಿ ಇರುವ ಮುಖ್ಯ ವ್ಯತ್ಯಾಸವೆಂದರೆ ಮೊದಲನೆಯದು ಯಾವುದೇ ಎಗ್ಗಿಲ್ಲದೆ ಮೇಲೆದ್ದು ಕಾಣುತ್ತದೆ. ಎರಡನೆಯದು ಒಳಗೊಳಗೆ ಕೆಲಸಮಾಡುತ್ತಿರುತ್ತದೆ. ಮೊದಲನೆಯದರಲ್ಲಿ ಆವೇಶದ ಭರದಲ್ಲಿ ಶಾರೀರಿಕವಾಗಿ ಹಾನಿಯನ್ನು ಉಂಟುಮಾಡುವತ್ತ ಒಲವು ಕಂಡುಬರುವುದಾದರೆ ಎರಡನೆಯದರಲ್ಲಿ ತಲೆತಗ್ಗಿಸುವಂತೆ ಮಾಡುವತ್ತ ಹೊಟ್ಟೆಕಿಚ್ಚಿನ ಬುದ್ಧಿ ತತ್ಪರವಾಗಿರುತ್ತದೆ. ಮೊದಲನೆಯದು ಶಾರೀರಿಕವಾಗಿ ಬಲಶಾಲಿಗಳಾಗಿರುವವರನ್ನು ಪೀಡಿಸಿದರೆ ಎರಡನೆಯದು ಬುದ್ಧಿವಂತರನ್ನು ಕಾಡುತ್ತದೆ. ಆವೇಶ ಪ್ರಧಾನವಾದ ಸೇಡಿನ ಪರಿಣಾಮವನ್ನು ನೋಡಬೇಕಾದರೆ ಸೇನಾ ನ್ಯಾಯಾಲಯಗಳಿಗೆ ಹೋಗಬೇಕಾಗಬಹುದು. ಆದರೆ ಎರಡನೆ ಬಗೆಯ ಸೇಡಿನ ಪರಿಣಾಮವನ್ನು ಕಾಣಬೇಕಾದರೆ ಹೆಚ್ಚು ದೂರ ಹೋಗುವ ಅಗತ್ಯ ಬೀಳುವುದಿಲ್ಲ. ನಮ್ಮ ಮನೆಗಳಲ್ಲಿ, ಕಛೇರಿಗಳಲ್ಲಿ, ಸುತ್ತಮುತ್ತಲಲ್ಲಿ ಎಲ್ಲಿ ಬೇಕಾದರೂ ವಿಪುಲವಾದ ಉದಾಹರಣೆಗಳು ಸುಲಭವಾಗಿ ದೊರೆಯುತ್ತವೆ. ಒಂದುವೇಳೆ ಸಮದರ್ಶಿ ಭಾವನೆಯಿಂದ ನಮ್ಮ ಹೃದಯವನ್ನೇ ತಡಕಾಡಿ ಅರಿಯುವ ಪ್ರಯತ್ನ ಮಾಡಿದರೆ ಅಕ್ಕಪಕ್ಕ ಕಣ್ಣು ಹಾಯಿಸುವ ಕಷ್ಟವನ್ನೂ ತೆಗೆದುಕೊಳ್ಳಬೇಕಾಗಿ ಬರುವುದಿಲ್ಲ.

'ಈರ್ಷ್ಯಾ ಪ್ರಧಾನವಾದ' ಸೇಡು ಹಾಗೂ ಈರ್ಷ್ಯೆ ಇವೆರಡರ ನಡುವೆ ಇರುವ ವ್ಯತ್ಯಾಸವನ್ನೂ ಸ್ಪಷ್ಟಪಡಿಸುವುದು ಒಳ್ಳೆಯದು. ಒಬ್ಬ ಮನುಷ್ಯ ತಾನು ಎಲ್ಲಿ ಕುಳಿತುಕೊಂಡಿರಬೇಕೆಂದು ಬಯಸುತ್ತಾನೆಯೊ ಆ ಜಾಗದಲ್ಲಿ ಅವನ ಬದಲಿಗೆ ಬೇರೊಬ್ಬರು—ಸಂಬಂಧಿಗಳು, ಜೊತೆಗಾರರು ಅಥವಾ ಹತ್ತಿರದ ಇನ್ನಾವುದೇ ವ್ಯಕ್ತಿ—ಕುಳಿತಿದ್ದರೆ ಮನಸ್ಸಿನಲ್ಲೇ ಕರುಬುತ್ತಾನೆ. ಅವನಿಗೆ ಹೊಟ್ಟೆ ಕಿವಿಚಿದಂತಾಗಿ ಮನಸ್ಸಿನಲ್ಲೇ ಆ ಇನ್ನೊಬ್ಬ ವ್ಯಕ್ತಿಗೆ ಕೆಟ್ಟದಾಗಲೆಂದು ಹಾರೈಸಬಹುದು. ಆ ಮಟ್ಟಿಗೆ ಅವನು ಕೇವಲ ಹೊಟ್ಟೆಕಿಚ್ಚಿನವನು ಎನಿಸಿಕೊಳ್ಳುತ್ತಾನೆ. ಆದರೆ ಈ ರೀತಿ ಅಷ್ಟಕ್ಕೇ ನಿಲ್ಲದೆ ಕೇಡನ್ನು ಕಾರ್ಯರೂಪಕ್ಕೆ ಇಳಿಸುವ ಪ್ರಯತ್ನವನ್ನೂ ಮಾಡಿದರೆ ಅವನು ಸೇಡಿಗೆ ಹಾತೊರೆಯುವವನು ಎನಿಸಿಕೊಳ್ಳುತ್ತಾನೆ.

ಒಂದುವೇಳೆ ನಾವು ನಮ್ಮ ನಮ್ಮ ಕ್ಷೇತ್ರಗಳಲ್ಲಿ ನಿಜವಾಗಿಯೂ ಯಶಸ್ವಿಯಾದ ವ್ಯಕ್ತಿಗಳಾಗಿದ್ದರೆ ನಮ್ಮನ್ನು ಕಂಡು ಹೊಟ್ಟೆಕಿಚ್ಚುಪಡುವವರ ಸಂಖ್ಯೆ ಇಷ್ಟೆಂದು ಪತ್ತೆ ಹಚ್ಚಲಾಗುವುದಿಲ್ಲ. ಆದರೆ ನಾವು ನೆಲಕಚ್ಚುವಂತೆ ಅಥವಾ ತಲೆತಗ್ಗಿಸುವಂತೆ ಮಾಡಲು ಉಪಕ್ರಮಿಸುವ ಜನರ ಸಂಖ್ಯೆಯನ್ನು ಹಾಗೂ ಹೀಗೂ ಪತ್ತೆ ಹಚ್ಚಬಹುದು. ಇದನ್ನೇ ಬೇರೆ ರೀತಿಯಲ್ಲಿ ಹೇಳುವುದಾದರೆ ನಾವು ಯಾರನ್ನು ನಮ್ಮ ವಿರುದ್ಧ ಹೊಟ್ಟೆಕಿಚ್ಚುಪಡುವವರು ಎಂದು ಭಾವಿಸುತ್ತೇವೆಯೊ ಅವರೆಲ್ಲ ವಾಸ್ತವವಾಗಿ ಸೇಡಿಗೆ ಹಾತೊರೆಯುವವರೇ. ಕೇವಲ ಹೊಟ್ಟೆಕಿಚ್ಚು ಪಡುವವರು ಹೇಗಿರುತ್ತಾರೆಂದರೆ ಅವರನ್ನು ಪತ್ತೆಮಾಡುವುದೇ ಅಸಾಧ್ಯವಾಗಿರುತ್ತದೆ.

ಈ ರೀತಿ ಹೊಟ್ಟೆಕಿಚ್ಚು ಪಡುವ ಒಬ್ಬ ವ್ಯಕ್ತಿ ಚಿತ್ರಕಲಾವಿದನಾದರೆ ತನಗಿಂತ ಹೆಚ್ಚಿನ ಸಾಧನ ಸಂಪತ್ತು ಉಳ್ಳವರ ಪ್ರತಿಷ್ಠೆಯನ್ನು ಕಡಮೆಮಾಡಲು ಅವರ ವ್ಯಂಗ್ಯಚಿತ್ರಗಳನ್ನು ಮಾಡತೊಡಗುತ್ತಾನೆ. ಲೇಖಕನಾದರೆ ತನಗೆ ಕಂಡಾಗದವರನ್ನು ಬರವಣಿಗೆಯ ಮೂಲಕ ವಿಕೃತಗೊಳಿಸಬಯಸುತ್ತಾನೆ. ಒಂದುವೇಳೆ ಅಂಥ ವ್ಯಕ್ತಿ ಮುಂದಾಳುವಿನ ಸ್ವಭಾವದವನಾಗಿದ್ದರೆ ತನ್ನಂತೆಯೇ ಇರುವ ಹಿಂಬಾಲಕರನ್ನು ಸೇರಿಸಿಕೊಂಡು ಗುಂಪುಕಟ್ಟುತ್ತಾನೆ. ಆ ಗುಂಪಿನ ಮೂಲಕ ಅವನು ತನ್ನ ಸೇಡಿಗೆ ಗುರಿಯಾದ ಮನುಷ್ಯನ ಸಾಧನ ಸಂಪತ್ತುಗಳನ್ನು ಹಾಳುಮಾಡಬಯಸುತ್ತಾನೆ. ಈ ಮೇಲೆ ಹೇಳಿದ ವ್ಯಕ್ತಿ ಅಕಸ್ಮಾತ್ ಪ್ರತಿಭಾಶಾಲಿಯೂ ಆಗಿದ್ದಲ್ಲಿ ತನ್ನಂತಹ ಜನರ ಗುಂಪಿನಲ್ಲಿ ದೊಡ್ಡ ಹೆಸರು ಪಡೆದು ಪ್ರಸಿದ್ಧನೆನಿಸುತ್ತಾನೆ. ಆಗ ಅಂಥ ಹೊಟ್ಟೆಕಿಚ್ಚಿನ ಸೇಡುಗಾರನನ್ನು ನಾವು ಯಶಸ್ವಿ ಚಿತ್ರಕಲಾವಿದ, ಯಶಸ್ವಿ ವ್ಯಂಗ್ಯಕಾರ, ಯಶಸ್ವಿ ಲೇಖಕ, ಯಶಸ್ವಿ ರಾಜಕಾರಣಿ ಎಂದೆಲ್ಲ ಕರೆಯುತ್ತೇವೆ. ಅವನ ಯಶಸ್ಸಿನ ಒಂದು ಗುಟ್ಟು ಏನೆಂದರೆ ನಮ್ಮಲ್ಲಿ ಉಳ್ಳವರ ಸಂಖ್ಯೆ ಇಲ್ಲದವರ ಸಂಖ್ಯೆಗಿಂತ ಸಾಕಷ್ಟು ಕಡಮೆ ಎಂಬುದು. ಮೇಲೆ ಹೇಳಿದ ಕಲಾವಿದ ಮುಂತಾದವರು ಬಹುಮಂದಿಯ ಭಾವನೆಗಳನ್ನು ಪ್ರತಿನಿಧಿಸುವುದರಿಂದ ಅಂಥ ಜನರ ಶ್ರದ್ಧೆ ವಿಶ್ವಾಸಗಳಿಗೆ ಪಾತ್ರರಾಗುತ್ತಾರೆ. ಸಾಧನ ಸಂಪತ್ತು ಉಳ್ಳವರನ್ನು ಲೇವಡಿ ಮಾಡುತ್ತಲೇ ಬೆಳೆಯುವ ಇಂಥ ಮಂದಿ ಅನಂತರ ತಾವೂ ಉಳ್ಳವರಾಗುವಂತಾದರೂ ತಮಗೆ ಹೆಸರು ಹಣ ತಂದುಕೊಟ್ಟ ಆ ಹಿಂದಿನ ಕೆಲಸವನ್ನು ಮಾತ್ರ ಬಿಡಲಾರರು.

ಒಬ್ಬ ವ್ಯಕ್ತಿ ತನ್ನ ಯಾವುದಾದರೂ ಕಲಾವಂತಿಕೆಯ ಕಾರಣದಿಂದಾಗಿ ಯಶಸ್ವಿಯೆನಿಸಿದರೆ ಅದರೊಟ್ಟಿಗೆ ತನ್ನ ಕ್ಷೇತ್ರದಲ್ಲಿ ವಿಫಲರೆನಿಸಿದ ಕಲಾವಿದರ

ಕಣ್ಣಿಗೆ ಮುಳ್ಳಾಗುತ್ತಾನೆ. ಆಮೇಲೆ ಅವನನ್ನು ಆ ಜಾಗದಿಂದ ಕೆಳಗುರುಳಿಸಲು ಸೇಡುಗಾರರ ಒಂದು ಹೊಸ ತಂಡವೇ ಹುಟ್ಟಿಕೊಳ್ಳುತ್ತದೆ. ಕೆಲವು ಮಂದಿ ಟೀಕೆಮಾಡತೊಡಗುತ್ತಾರೆ, ವಿಮರ್ಶಕರಾಗುತ್ತಾರೆ. ಅಂಥ ವಿಮರ್ಶಕರಲ್ಲೂ ಯಾರು ತುಂಬ ಯಶಸ್ವಿಗಳೆನಿಸುತ್ತಾರೊ ಅವರು ಉಳಿದ ವಿಫಲ ವಿಮರ್ಶಕರ ಪಾಲಿಗೆ ನುಂಗಲಾರದ ತುತ್ತಾಗುತ್ತಾರೆ. ಅಂಥ ವಿಫಲ ವಿಮರ್ಶಕರಲ್ಲಿ ಯಾರು ಕಟುವಾಗಿ ಟೀಕೆಮಾಡಬಲ್ಲವನಾಗುತ್ತಾನೊ ಅವನು ಮತ್ತೆ ಯಶಸ್ವಿಯೆನಿಸಿ ಕೊಳ್ಳುತ್ತಾನೆ. ಈ ರೀತಿಯಾಗಿ ಸೇಡಿನ ಚಕ್ರ ಕೊನೆಯಿಲ್ಲದೆ ಚಲಿಸುತ್ತಲೇ ಇರುತ್ತದೆ.

ಯಾವುದೇ ಒಂದು ವ್ಯಾಪಾರ ಸಂಸ್ಥೆಯ ಇಬ್ಬರು ಪಾಲುದಾರರು, ಒಂದು ಸಂಸ್ಥೆಯಲ್ಲಿ ಕೆಲಸಮಾಡುವ ಸಮಾನಸ್ಕಂಧರಾದ ಇಬ್ಬರು ಸದಸ್ಯರು, ಒಂದು ಕಚೇರಿಯಲ್ಲಿ ಸಮವಾದ ಹುದ್ದೆಯಲ್ಲಿ ಕೆಲಸಮಾಡುವ ಉದ್ಯೋಗಿಗಳು ಇಂಥವರಲ್ಲಿ ಒಬ್ಬನ ಪ್ರತಿಷ್ಠೆ ಹಾಗೂ ಸ್ಥಾನಮಾನಗಳು ಏರಿತೆಂದರೆ ಇನ್ನೊಬ್ಬ ಕೈಕಟ್ಟಿ ಕೂರುವುದಿಲ್ಲ. ಆ ಒಬ್ಬನ ಪ್ರತಿಷ್ಠೆಯನ್ನು ಕೆಳಗಿಳಿಸಲು ಈ ಇನ್ನೊಬ್ಬ ಏನಾದರೂ ಪ್ರಯತ್ನ ಮಾಡಿಯೆ ಮಾಡುತ್ತಾನೆ. ಮುಯ್ಯಿ ತೀರಿಸಿಕೊಳ್ಳಲು ಯಾವುದೇ ದಾರಿ ಕಾಣದೆ ಹೋದರೆ ಆ ಒಬ್ಬನು ಮಾಡಿದ ಯಾವುದಾದರೂ ಏರ್ಪಾಟು ಅಥವಾ ನೀಡಿದ ಸಲಹೆ ಇವುಗಳನ್ನು ಈ ಇನ್ನೊಬ್ಬ ಪೂರ್ವಗ್ರಹ ಪೀಡಿತನಾಗಿ ಒಪ್ಪದೆ ಹೋಗುತ್ತಾನೆ. ತನ್ನ ವೈಫಲ್ಯವನ್ನು ಯಾವಾಗಲೂ ಇನ್ನೊಬ್ಬನ ಯಶಸ್ಸಿನ ಜೊತೆಯಲ್ಲಿ ಗಂಟುಹಾಕುವ ಮನುಷ್ಯ ಸಹಜವಾಗಿಯೆ ಹೊಟ್ಟೆಕಿಚ್ಚಿಗೆ ಈಡಾಗುತ್ತಾನೆ. ಇಂಥ ಜನ ಸೇಡುತೀರಿಸಿಕೊಳ್ಳಲು ಹುಡುಕುವ ದೊಡ್ಡ ಉಪಾಯ ಎಂದರೆ—ಹೆಸರಿಗೆ ಮಸಿಬಳಿಯುವುದು, ಬೆನ್ನಹಿಂದೆ ಮಾತಾಡುವುದು, ಚಾಡಿ ಹೇಳುವುದು ಇತ್ಯಾದಿ.

೬

ಸೇಡು ತೀರಿಸಿಕೊಳ್ಳುವುದು ಕೇವಲ ಸಮರ್ಥವ್ಯಕ್ತಿಗಳ ಗುತ್ತಿಗೆಯೇನಲ್ಲ. ಕೈಲಾಗದವರು ಕೂಡ ತಮಗೆ ಉಂಟಾದ ಅನ್ಯಾಯದ ವಿರುದ್ಧ ತಮ್ಮದೇ ಆದ ರೀತಿಯಲ್ಲಿ ಸೇಡುತೀರಿಸಿಕೊಂಡು ಮನಸ್ಸಿಗೆ ಸಮಾಧಾನ ತಂದುಕೊಳ್ಳುವುದುಂಟು. ಒಬ್ಬ ಜವಾನನಿಗೆ ತನ್ನ ಯಜಮಾನನ ಮೇಲೆ ಸಿಟ್ಟುಬಂದರೆ ಏನು ಮಾಡುತ್ತಾನೆ? ಅವನು ಸಮರ್ಥನಾಗಿದ್ದಿದ್ದರೆ ಯಜಮಾನನಿಗೆ ತೊಂದರೆ ಉಂಟಾಗುವಂತಹ ಯಾವುದಾದರೂ ನೇರವಾದ ಮಾರ್ಗವನ್ನು ಹುಡುಕುತ್ತಿದ್ದ.

ದರೆ ಅವನು ಬಡಪಾಯಿ. ಆದ್ದರಿಂದ ಹೊಸದಾದ ಬೇರೆ ರೀತಿಯಲ್ಲಿ ಮುಯ್ಯಿ ೕರಿಸಿಕೊಳ್ಳುತ್ತಾನೆ.

ಅವನ ಯಜಮಾನ ಒಂದುವೇಳೆ ಶುಚಿಪ್ರಿಯನಾಗಿದ್ದ ಪಕ್ಷದಲ್ಲಿ ಅವ ಂದ ತಿನ್ನಬೇಕಾಗಿಬಂದ ಬೈಗಳ ಬದಲಾಗಿ ಜವಾನ ಎಂಜಲು ಲೋಟದಲ್ಲಿ ವನಿಗೆ ನೀರು ಕುಡಿಸಿಬಿಡುತ್ತಾನೆ. ವಾಸ್ತವನಾಗಿ ಅವನು ಯಜಮಾನನಿಗೆ ಯಾವುದೇ ಅಪಾಯ, ತೊಂದರೆ ಮಾಡಿದ ಹಾಗಾಗಲಿಲ್ಲ. ಆದರೆ ಇಲ್ಲಿ ತೊಂದರೆ ಯಿತೆ ಇಲ್ಲವೆ ಎಂಬುದು ಮುಖ್ಯವಲ್ಲ. ಅವನು ತನ್ನ ಕಡೆಯಿಂದ ಪ್ರಯತ್ನವ ್ಟಂತೂ ಮಾಡಿದ. ಆ ಕಿಂಚಿತ್ ಪ್ರಯತ್ನದಿಂದಲೇ ಅವನ ಮನಸ್ಸಿಗೆ ಶಾಂತಿ ೊರೆತ ಹಾಗಾಯಿತು.

ತಂದೆತಾಯಿಗಳಿಗೆ ಮಕ್ಕಳೆಂದರೆ ಪ್ರೀತಿ, ಮುದ್ದುಮಾಡುತ್ತಾರೆ. ಆದರೂ ಲವೊಮ್ಮೆ ಮಕ್ಕಳನ್ನು ಬೈಯ್ಯುತ್ತಾರೆ, ಗದರಿಸುತ್ತಾರೆ ಅಥವಾ ಮಗುವಿಗೆ ಷ್ಟವಾಗುವ ಕೆಲಸವನ್ನು ಅದು ಮಾಡದಂತೆ ತಡೆಯೊಡ್ಡುತ್ತಾರೆ. ಆ ರೀತಿ ರ್ಬಂಧಿಸುವುದು ಮಗುವಿನ ಒಳ್ಳೆಯದಕ್ಕೇ ಆದರೂ ಮಗು ಅವರ ಆಶಯ ನ್ನು ಅರ್ಥಮಾಡಿಕೊಳ್ಳಲಾರದು. ಮಗುವಿಗೆ ತಂದೆತಾಯಿಗಳ ಮೇಲೆ ಸಿಟ್ಟು ರುತ್ತದೆ. ಅವರನ್ನು ಸತಾಯಿಸುವ ಉಪಾಯವನ್ನು ಯೋಚಿಸತೊಡಗುತ್ತದೆ. ಗೋ ನೋಡಿ—ಅಮ್ಮ ಕೂಗಿ ಕರೆದಾಗ ತನಗೆ ಕೇಳಿಸಲಿಲ್ಲ ಎಂಬಂತೆ ಸುಮ್ಮ ರುತ್ತದೆ. ಅಮ್ಮ ಕೂಗಿಕೊಳ್ಳುತ್ತಿದ್ದರೆ ಅದಕ್ಕೆ ಖುಷಿ. ಊಟ ಕಲೆಸಿಕೊಂಡು ಂದಾಗ ಆಟದ ನೆಪಮಾಡಿಕೊಂಡು ಓಡುತ್ತಿರುತ್ತದೆ. ಅಮ್ಮ ಹಿಂದೆ ಹಿಂದೆ ಟ್ಟಿಸಿಕೊಂಡು ಹೋಗಬೇಕು. ಮಗುವನ್ನು ಹೇಗೆ ಸಮಾಧಾನಪಡಿಸುವುದು ಂತ ಅಮ್ಮ ಆಲೋಚಿಸುತ್ತಾ ದಾರಿ ಹುಡುಕಬೇಕಾಗುತ್ತದೆ.

ಈ ರೀತಿ ಅಪ್ಪ ಅಮ್ಮನನ್ನು ಸತಾಯಿಸುವುದರಲ್ಲಿ ಮಗು ಅವರಿಗೆ ೊಂದರೆ ಕೊಡುವುದಕ್ಕಿಂತ ಮಿಗಿಲಾಗಿ ತಾನು ತೊಂದರೆಗೆ ಒಳಗಾಗುತ್ತಿರುತ್ತದೆ ಂಬುದು ಬೇರೆ ಮಾತು. ಆದರೆ ಮುಯ್ಯಿ ತೀರಿಸಿಕೊಳ್ಳುವವರು ಯಾರೇ ಗಿರಲಿ, ಕಷ್ಟದ ಪರಿವೆ ಎಲ್ಲಿ ? ಆದರೆ ಅಪರಿಪಕ್ವವಾದ ಬುದ್ಧಿ ತಂದೆತಾಯಿ ಳಿಗೆ ಸರಿಯಾಗಿ ಗೋಳು ಹೊಯ್ದುಕೊಂಡನೆಂದು ತಿಳಿದು ಸಂತೋಷಪಟ್ಟು ೊಳ್ಳುತ್ತದೆ. ಏನೋ ತನ್ನ ಕೈಲಾದಷ್ಟು ಮಟ್ಟಿಗೆ ಸ್ವಲ್ಪವಾದರೂ ಕಷ್ಟಕೊಟ್ಟು ದು ಸಮಾಧಾನ ತಂದುಕೊಳ್ಳಬಲ್ಲದು. ಕೈಲಾಗಿದ್ದಿದ್ದರೆ ಇನ್ನೂ ಹೆಚ್ಚು ೋಳುಗುಟ್ಟಿಸುತ್ತಿತ್ತೇನೊ.

ಆದೇ ಹುಡುಗ ದೊಡ್ಡವನಾಗಿ ಬೆಳೆದು ನಿಂತಾಗ ವಯಸ್ಸಾದ ತಂದೆತಾಯಿ

ಗಳು ಅವನನ್ನು ಆಶ್ರಯಿಸುತ್ತಾರೆನ್ನಿ. . ಆಗ ಅವನು ಚಿಕ್ಕಂದಿನಲ್ಲಿ ತಾನು ಅಸಹಾಯಕ ಪರಿಸ್ಥಿತಿಯಲ್ಲಿ ಅನುಭವಿಸಿದ ಕಷ್ಟಗಳಿಗೆ ಪ್ರತಿಯಾಗಿ ಅವರನ್ನು ತೊಂದರೆಗೆ ಈಡುಮಾಡಿ ಸಂತೋಷಪಡುತ್ತಾನೆ. ಅವನಿಗೆ ಚಿಕ್ಕಂದಿನ ಯಾವ ಘಟನೆಯೂ ನೆನಪಿಗೆ ಬರದಿರಬಹುದು, ಆದರೆ ಅಚೇತನ ಮನಸ್ಸಿನಲ್ಲಿ ತಿರಸ್ಕಾರ ಹೆಪ್ಪುಗಟ್ಟಿರುತ್ತದೆ. ತಂದೆತಾಯಿಗಳಿಗೆ ಬೇಕಾದ ತೀರ ಆವಶ್ಯಕ ವಸ್ತುಗಳನ್ನು ಅವನು ತೆಗೆದುಕೊಡದೆ ಹೋಗಬಹುದು. ಅದೇ ಅವರೆದುರಿಗೆ ಕೆಲಸಕ್ಕೆ ಬಾರದ ಪದಾರ್ಥಗಳನ್ನು ತನಗಾಗಿ ಹಣ ಸುರಿದು ತಂದು ವಿಚಿತ್ರವಾದ ಆನಂದವನ್ನು ಅನುಭವಿಸುತ್ತಾನೆ. ಈ ಆನಂದ ಮುಯ್ಯಿ ತೀರಿಸಿಕೊಂಡ ಆನಂದವಲ್ಲದೆ ಬೇರೆ ಏನಲ್ಲ.

ಈ ಬಗೆಯಾಗಿ ತಿರಸ್ಕಾರಕ್ಕೊಳಗಾದ ತಂದೆತಾಯಿಗಳು ಸಹ ತಮ್ಮ ಮಕ್ಕಳು ಮಾಡುವ ಇಂಥ ಕೆಲಸಗಳನ್ನು ಮನ್ನಿಸಲಾರರು. ನಿಸ್ಸಂದೇಹವಾಗಿಯೂ ಅವರು ಮಕ್ಕಳ ಕೇಡನ್ನು ಬಯಸಲಾರರು. ಅವರಿಗೆ ಕಷ್ಟಕೊಟ್ಟ ಮಗನಿಗೊ ಮಗಳಿಗೊ ಒಂದು ಪಕ್ಷ ತಮ್ಮ ರಕ್ತವನ್ನೇ ಕೊಡಬೇಕಾಗಿಬಂದರೆ ದೇಹದ ಒಂದೊಂದು ತೊಟ್ಟು ರಕ್ತವನ್ನೂ ಧಾರೆಯೆರೆಯುವುದಕ್ಕೆ ಅವರು ಸಿದ್ಧ. ಆದರೆ ಮುಯ್ಯಿ ತೀರಿಸಿಕೊಳ್ಳುವ ವ್ಯಾಮೋಹವನ್ನಂತೂ ಅವರು ಬಿಡಲಾರರು.

ನನಗೆ ಒಬ್ಬ ವಯಸ್ಸಾದ ಹೆಂಗಸಿನ ಪರಿಚಯ ಉಂಟು. ಆಕೆಯ ಮಗ ಒಬ್ಬ ಗೆಜೆಟೆಡ್ ಅಧಿಕಾರಿ. ಆದರೆ ಅವನ ತಾಯಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದ ಮೇಲೆ ಬೇರೊಬ್ಬರ ಮನೆಯಲ್ಲಿ ಪಾತ್ರೆ ತೊಳೆಯುತ್ತಾಳೆ. ಆ ಮನೆಯೊಡೆಯರಿಗೆ ಈ ಹೆಂಗಸಿನ ಗುಣಸ್ವಭಾವಗಳನ್ನು ಎಷ್ಟು ಹೊಗಳಿದರೂ ಸಾಲದು. ಮನೆಯಲ್ಲಿ ಸುಮ್ಮನೆ ಯಾವುದಾದರೂ ಮೂಲೆಯಲ್ಲಿ ಕುಳಿತಿದ್ದರೆ ನಾನು ತಿಂಗಳಿಗೆ ಅವಳಿಗೆ ನೂರುರೂಪಾಯಿ ಕೊಡುತ್ತೇನೆ ಅಂತ ಮಗ ಅಂತಾನೆ. ಆದರೆ ಆಕೆಗೆ ಅದು ಒಪ್ಪಿಗೆಯಿಲ್ಲ. ಸುಮ್ಮನೆ ಮೂಲೆ ಹಿಡಿಯುವುದಂತೂ ಸುತರಾಂ ಇಷ್ಟವಿಲ್ಲ. ಕೆಲಸಮಾಡುವ ಮನೆಯಲ್ಲಿ ಆಕೆ ಯಾಕೆ ಸದ್ಗುಣಗಳ ಮೂರ್ತಿಯಾಗಿರುತ್ತಾಳೆಂದರೆ ಅಲ್ಲಿ ತನ್ನ ಯಾವುದೇ ಅಧಿಕಾರ ಚಲಾಯಿಸುವ ಅವಕಾಶವಿರುವುದಿಲ್ಲ. ಆದರೆ ತನ್ನ ಮನೆಯಲ್ಲಿ ಮಗ ಮತ್ತು ಸೊಸೆಯ ಮೇಲೆ ಹಕ್ಕನ್ನು ಅಧಿಕಾರವನ್ನು ಚಲಾಯಿಸಬಯಸುತ್ತಾಳೆ. ತನ್ನ ಮನೆಯಲ್ಲಿ ಖಾಲಿ ಹೊಟ್ಟೆ ಮಲಗಿದರೂ ಆಕೆಗೆ ತೃಪ್ತಿ, ಅದು ಯಾವಾಗ ಎಂದರೆ ಎಳೆತನದಲ್ಲಿ ಅವಳಿಗೆ ಮಗನಿಂದ ದೊರಕುತ್ತಿದ್ದ ಆ ಪ್ರೀತಿವಿಶ್ವಾಸಗಳು ಮತ್ತೆ ದೊರಕಬೇಕು; ಸೊಸೆ ಬಂದು ಕಸಿದುಕೊಂಡಿರುವ ಅಧಿಕಾರ ಅವಳಿಗೆ ಮತ್ತೆ ಕೈಸೇರಬೇಕು.

ಂದುವೇಳೆ ಆ ಅಧಿಕಾರ, ಆ ಪ್ರೀತಿವಿಶ್ವಾಸ ಸಿಗದೆಹೋದರೆ ಅವಳು ಬೇರೆ
ುವರ ಮನೆಯ ಮುಸುರೆ ತೊಳೆಯಲೂ ಸಿದ್ಧ. ಅವರು ಕೊಡುವ ತಂಗಳೂಟ
ಾದರೂ ಸರಿಯೆ. ಈ ರೀತಿ ಮಾಡುವುದರಿಂದ ಕಡೆಯಪಕ್ಷ ಅವಳು ತನ್ನ
ುಗನ ಕೃತಘ್ನತೆಯ ವಿಚಾರವಾಗಿ ಡಂಗೂರ ಸಾರಬಲ್ಲಳಲ್ಲ. ಜನರು ಸಹಾನು
ೂತಿಯಿಂದ ಆಡುವ ಎರಡು ಮಾತು ಕಿವಿಯ ಮೇಲೆ ಬೀಳುತ್ತದೆ—'ನೋಡಿ,
ುಗನನ್ನ ಕಷ್ಟಪಟ್ಟು ಓದಿಸಿ ಬರೆಸಿ ಮಾಡಿದಳು. ಅದಕ್ಕೆ ಅವನು ಸರಿಯಾಗಿ
್ರತಿಫಲ ಕೊಟ್ಟ.' ಗಾಯಗೊಂಡ ಆಕೆಯ ಅಹಂ ಮೇಲೆ ಈ ಮಾತುಗಳು
ುಪಾದ ಮುಲಾಮಿನಂತೆ ಕೆಲಸ ಮಾಡುತ್ತವೆ. ಈ ರೀತಿಯ 'ಅಯ್ಯೋ ಪಾಪ'
ುಬ ಮಾತುಗಳನ್ನು ಕೇಳಲು ಅವಳು ಎಂಥ ಶೋಚನೀಯ ಪರಿಸ್ಥಿತಿಯಲ್ಲೂ
ದ್ಧ ! ತನ್ನ ಮಗನಿಗೆ ಶಾರೀರಿಕವಾಗಿ ಕೇಡನ್ನು ಬಯಸದೆ ಹೋದರೂ, ಅವನ
ೌರವಕ್ಕೆ ಮಸಿಹಚ್ಚುವುದರಲ್ಲಿ ಅವಳು ಯಶಸ್ವಿ. ಅವನ ಕೃತಘ್ನತೆಗೆ ವಿರುದ್ಧ
ಾಗಿ ಮುಯ್ಯಿಯಂತೂ ತೀರಿದ ಹಾಗಾಯಿತು.

✲

ಸೇಡಿನ ಇನ್ನೂ ಹಲವಾರು ರೂಪಗಳು ನಮ್ಮ ಮುಂದೆ ಬರುತ್ತವೆ.
ದರೆ ಇವೆಲ್ಲವನ್ನೂ ಎಣಿಸಲು ಸಾಧ್ಯವಾಗುವುದಿಲ್ಲ. ಇವುಗಳಲ್ಲಿ ಕೆಲವನ್ನು
ಾತ್ರ ಇಲ್ಲಿ ಉದಾಹರಿಸಬಹುದು—

ಸಮಾಜದಲ್ಲಿ ಪ್ರತಿಯೊಬ್ಬ ಮನುಷ್ಯನನ್ನು ಹೀಯಾಳಿಸುವ, ಅಲ್ಲಗಳೆ
ುವ ಮಹಾಶಯನೊಬ್ಬನದು ಮೊದಲ ಉದಾಹರಣೆ. ಇವನಿಗೆ ಯಾರನ್ನು
ಡರೂ ತಿರಸ್ಕಾರ. ಇವನು ಒಂದು ಕಾಲದಲ್ಲಿ ಸಮಾಜದಿಂದ ತೀವ್ರ ತಿರಸ್ಕಾ
್ಕೆ ಒಳಗಾಗಿದ್ದ ವ್ಯಕ್ತಿ. ಈಗ ಇವನು ಮತ್ತೆ ಮತ್ತೆ ಹೇಳಿಕೊಂಡು ತಿರುಗು
್ತನೆ— "ನನಗೆ ಯಾರಿಂದೇನೂ ಆಗಬೇಕಾಗಿಲ್ಲ. ನಾನು ಯಾರಿಗೂ 'ಕೇರ್'
ಾಡುವುದಿಲ್ಲ." ತನಗೆ ಉಂಟಾದ ತಿರಸ್ಕಾರದ ವಿರುದ್ಧ ಸೇಡು ತೀರಿಸಿ
ಳ್ಳುವ ವೈಖರಿ ಇದು.

ಇನ್ನೊಬ್ಬ ಮನುಷ್ಯ ಇದ್ದಕ್ಕಿದ್ದಂತೆ ಕರುಣಾಳುವಾಗಿದ್ದವನು ಕ್ರೂರಿಯಾಗಿ
ಡುತ್ತಾನೆ. ಅವನ ಸ್ವಂತ ಜೀವನದ ಕಡೆ ಕಣ್ಣು ಹಾಯಿಸಿದರೆ ಅವನ ಹೃದಯ
ರಿವರ್ತನೆಗೆ ಕಾರಣ ಸಿಗುತ್ತದೆ. ಬಹುಶಃ ಅವನ ಹರಯದ ಮಗ ನಿಷ್ಠುರವಾಗಿ
ವಿಗೆ ತುತ್ತಾಗಿರಬಹುದು. ಅಥವಾ ಅವನ ಒಳ್ಳೆಯ ನಡವಳಿಕೆಯನ್ನು
ುರುಪಯೋಗಪಡಿಸಿಕೊಂಡು ಸಂಬಂಧಿಗಳಲ್ಲಿ ಯಾರಾದರೂ ಬಲವಾಗಿ ಕೈಕೊ
್ಟಿರಬಹುದು.

ಒಂದುವೇಳೆ ಅದೇ ಮನುಷ್ಯ ಈ ಬಗೆಯ ಕೆಟ್ಟ ಘಟನೆಗಳು ನಡೆಯುವುದಕ್ಕಿಂತ ಮುಂಚೆ ಕ್ರೂರಿಯಾಗಿದ್ದಲ್ಲಿ ದೇವರು ತನ್ನ ಕ್ರೌರ್ಯಕ್ಕೆ ಸರಿಯಾಗಿ ಶಾಸ್ತಿಮಾಡಿದ ಅಂತ ಅಂದುಕೊಂಡು ದಯಾಳುವಾಗುತ್ತಿದ್ದನೇನೊ. ಆದರೆ ಅವನು ಈ ಮೊದಲು ಕರುಣಾಳುವಾಗಿದ್ದವನು. ಒಟ್ಟಿನಲ್ಲಿ ಈಗ ಅವನು ದೇವರ ಮೇಲೆ ಸೇಡು ತೀರಿಸಿಕೊಳ್ಳುವುದಕ್ಕೆ ಬದಲಾಗಿ ಆ ದೇವರ ಕಿಂಕರರ ಮೇಲೆ ವಿಷ ಕಾರತೊಡಗುತ್ತಾನೆ.

ಸೇಡಿನ ಮೂರನೆಯ ಹಾಗೂ ಅತ್ಯಂತ ಭಯಾನಕ ಸ್ಥಿತಿಯೆಂದರೆ ಇನ್ನೊಬ್ಬರಿಗೆ ತೊಂದರೆ ಉಂಟುಮಾಡುವ ಉದ್ದೇಶದಿಂದ ಸೇಡು ತೀರಿಸಿಕೊಳ್ಳುವವನು ತನ್ನ ಜೀವವನ್ನೇ ಬಲಿಗೊಡುವುದು. ಯಾರಾದರೂ ಆತ್ಮಹತ್ಯೆ ಮಾಡಿಕೊಂಡ ಬಗೆಗೆ ಸ್ವಲ್ಪ ಆಲೋಚಿಸಿ.

ಆತ್ಮಹತ್ಯೆ ಮಾಡಿಕೊಳ್ಳುವ ಪ್ರತಿಯೊಬ್ಬ ವ್ಯಕ್ತಿಯೂ ಸಾಯುವ ಮೊದಲು ಸಾಮಾನ್ಯವಾಗಿ ಒಂದು ಸಂದೇಶವನ್ನು ಬಿಟ್ಟುಹೋಗುತ್ತಾನೆ—'ಈಗ ನನ್ನ ಅಗತ್ಯ ಯಾರಿಗೂ ಇಲ್ಲ. ಈಗ ನನ್ನ ಸಾವಿನಿಂದ ಯಾರಿಗೂ ತೊಂದರೆಯಾಗುವುದಿಲ್ಲ, ಪಶ್ಚಾತ್ತಾಪ ಉಂಟಾಗುವುದಿಲ್ಲ. ನನಗಾಗಿ ಯಾರೂ ಕಣ್ಣೀರಿಡುವುದಿಲ್ಲ. ನಾನು ಈಗ ಸಾಯುವುದೇ ಮೇಲು.' ಆದರೆ ಇವೆಲ್ಲ ಮೇಲೆ ಹೇಳುವ ಮಾತುಗಳು. ತಾನು ಸತ್ತಾಗ ತನ್ನ ಹಿಂದೆ ಯಾರಾದರೂ ಒಬ್ಬರಿಗೆ ಖಂಡಿತ ಪಶ್ಚಾತ್ತಾಪ ಉಂಟಾಗುತ್ತದೆ. ಅವರು ಕಣ್ಣೀರು ಹಾಕುತ್ತಾರೆ ಎಂಬುದು ಅವನಿಗೆ ಗೊತ್ತು. ಸಾಯುವುದರಿಂದ ತನ್ನ ಹಿರಿಮೆ ಗೌರವ ಹೆಚ್ಚಾಗುತ್ತದೆಂಬುದು ಅವನ ಅನಿಸಿಕೆ. ತನ್ನ ಬೆಲೆಯನ್ನು ಹೆಚ್ಚಿಸಿಕೊಳ್ಳಲು ಇಲ್ಲವೆ ಇನ್ನೊಬ್ಬರಿಗೆ ಪಶ್ಚಾತ್ತಾಪ ಪಡಲು ಅವಕಾಶ ನೀಡಲು ಅವನು ಜೀವ ತೆರಲೂ ಹೇಸುವುದಿಲ್ಲ.

ಸೇಡು ತೀರಿಸಿಕೊಳ್ಳುವವನ ಎಲ್ಲ ಉಪಾಯಗಳೂ ವಿಫಲಗೊಂಡು ಅವನು ವಿಷಮ ಪರಿಸ್ಥಿತಿಯನ್ನು ತಲಪಿ ಹತಾಶನಾದಾಗ ಈ ಮಾರ್ಗ ಅವನ ಪಾಲಿಗೆ ಸೂಕ್ತವೆನಿಸುತ್ತದೆ. ತನ್ನ ಎದುರಾಳಿಯನ್ನು ಸಂಕಟದಲ್ಲಿ ಸಿಕ್ಕಿಸಲು ಅವನಿಗೆ ಇದಕ್ಕಿಂತ ಮಿಗಿಲಾಗಿ ಯಾವ ದಾರಿಯೂ ಕಾಣುವುದಿಲ್ಲ. ತಾನು ಸಾಯಬೇಕಾದರೆ ಬಿಡುವ ಚೀಟಿಯಲ್ಲಿ ತನ್ನ ಸಾವಿಗೆ ಯಾರನ್ನಾದರೂ (ತನಗೆ ಕೇಡು ಯಾರಿಂದಾಯಿತು ಅಂತ ಭಾವಿಸುತ್ತಾನೊ ಅವರನ್ನು) ಜವಾಬ್ದಾರರನ್ನಾಗಿ ಮಾಡುತ್ತಾನೆ. ಪ್ರಿಯೆ ಅಥವಾ ಪ್ರಿಯತಮನ ಮೇಲೆ, ಹೆಂಡತಿ ಅಥವಾ ಸಂಬಂಧಿಕರ ಅಥವಾ ಸಮಾಜದ ಇಲ್ಲವೆ ನಾಡಿನ ಮೇಲೆ ಸೇಡು ತೀರಿಸಿಕೊಳ್ಳುತ್ತಾನೆ.

ತ್ತು ಹಗೆ ತೀರಿಸಿಕೊಳ್ಳುವ ಈ ವಿಧಾನ ತುಂಬ ಭಯಂಕರವಾದುದು. ಎದು
ಳಿಗೆ ಅವನು ಅಪಕಾರ ಉಂಟುಮಾಡುತ್ತಾನೊ ಇಲ್ಲವೊ ಬೇರೆ ಮಾತು, ಆದರೆ
ದುರಾಳಿಯ ಹೆಸರಿಗೆ ಕಳಂಕ ಹಚ್ಚುವಲ್ಲಿ ಮಾತ್ರ ಯಶಸ್ವಿಯಾಗುತ್ತಾನೆ.

ಕೆಲವೊಮ್ಮೆ ಆತ್ಮಹತ್ಯೆ ಮಾಡಿಕೊಳ್ಳುವವರು ತಮ್ಮ ಸಾವಿನ ಜವಾಬ್ದಾರಿ ಯನ್ನು ಯಾರ ಮೇಲೂ ಹೊರಿಸುವುದಿಲ್ಲ. ಎದುರಾಳಿ ಯಾರೇ ಇರಲಿ ಈ ರೀತಿ ಮಾಡಿದರೆ ತನ್ನ ಸಾವಿಗೆ ಅವರು ಸ್ವತಃ ಕಾರಣರೆಂದು ಭಾವಿಸಿಕೊಂಡು ಇನ್ನೂ ಹೆಚ್ಚು ಬೇಗುದಿಗೊಳಗಾಗುತ್ತಾರೆ. ಆಗ ಅವರು ಕಾನೂನು ಪ್ರಕಾರ ಯಾವ ಶಿಕ್ಷೆಗೂ ಒಳಗಾಗದೆ ಜೀವನವಿಡೀ ಮನಸ್ಸಿನಲ್ಲೇ ಪಶ್ಚಾತ್ತಾಪ ಪಡುವಂತಾಗು ವುದೆ ಎಂಬುದು ಸಾಯುವವನ ಅನಿಸಿಕೆ. ಆ ಇನ್ನೊಬ್ಬ ವ್ಯಕ್ತಿ ನಿಜವಾಗಿಯೂ ಅನಂತರ ಪಶ್ಚಾತ್ತಾಪಕ್ಕೆ ಒಳಗಾಗುತ್ತಾನೊ ಇಲ್ಲವೊ ಎಂಬುದನ್ನು ಖಚಿತವಾಗಿ ಹೇಳಲಾಗುವುದಿಲ್ಲ. ಆದರೆ ಆತ್ಮಹತ್ಯೆ ಮಾಡಿಕೊಳ್ಳುವವನು ಅನಂತರ ಅದರ ಪರಿಣಾಮ ಎದುರಾಳಿಯ ಮೇಲೆ ಏನಾಗಬಹುದೆಂದು ಮನಸ್ಸಿನಲ್ಲೇ ಕಲ್ಪಿಸಿ ಕೊಳ್ಳುತ್ತಾನೆ. ಆ ಕಲ್ಪನೆಯಿಂದಲೇ ಅವನಿಗೆ ಸಾಯುವ ಮೊದಲ ಕೆಲವು ಕ್ಷಣ ಕಾಲ ವಿಚಿತ್ರವಾದ ಶಾಂತಿ ದೊರೆಯುತ್ತದೆ, ಬದುಕಿರುವವನು ಸರಿಯಾಗಿ ಸೇಡು ತೀರಿಸಿಕೊಂಡಾಗ ಪಡೆಯುವ ನೆಮ್ಮದಿಗಿಂತ ಅದು ಕಡಮೆಯೇನಲ್ಲ.

ಸೇಡಿನ ಭಯದಿಂದಾಗಿ ಮನುಷ್ಯರು ಸಾಮಾನ್ಯವಾಗಿ ಬೇರೆಯವರಿಗೆ ಹಾನಿಯನ್ನು ಉಂಟುಮಾಡಲು ಹೆದರುತ್ತಾರೆ. ಈ ದೃಷ್ಟಿಯಲ್ಲಿ ಸೇಡು ಸಮಾಜ ದ ಸಮತೋಲನವನ್ನು ಕಾಯ್ದುಕೊಂಡು ಬರುವಲ್ಲಿ ನಿಜಕ್ಕೂ ನೆರವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ ಸೇಡಿಗೆ ಹಾತೊರೆಯುವ ವ್ಯಕ್ತಿಯ ಪಾಲಿಗೆ ಆ ಪರಿಸ್ಥಿತಿ ನುಂಗಲಾಗದ ತುತ್ತು, ಒಂದು ಬಗೆಯ ಮಾನಸಿಕ ಶಿಕ್ಷೆ. ಈ ಸಮ ತೋಲನದ ದೆಸೆಯಿಂದಾಗಿ ಕಾನೂನುಪ್ರಕಾರ ದೊರಕಬಹುದಾದ ಶಿಕ್ಷೆಯಿಂದ ಅವನು ಬಚಾವಾಗುತ್ತಾನೆ. ಆದರೆ ಎದೆಯಲ್ಲಿ ಬೆಂಕಿಯನ್ನು ಹೊತ್ತೇ ತಿರುಗು ತ್ತಾನೆ. ಆ ಕಿಚ್ಚಿನಿಂದ ಅವನ ನೆಮ್ಮದಿ ಹಾಳಾಗುತ್ತದೆ. ಸೇಡು ತೀರಿಸಿ ಕೊಳ್ಳುವವರೆಗೆ ಅವನ ಮನಸ್ಸಿಗೆ ಶಾಂತಿ ದೊರೆಯುವುದಿಲ್ಲ. ಒಮ್ಮೊಮ್ಮೆ ಈ ಭಾವನೆ ಮನುಷ್ಯನನ್ನು ಪ್ರಾಣಿಗಳಿಗಿಂತ ಕಡೆಯಾಗಿ ಮಾಡುತ್ತದೆ.

ಕೆಲವು ಮಂದಿ ವಿದ್ವಾಂಸರು ಸೇಡನ್ನು 'ವೈರ ಶುದ್ಧಿ' ಎಂದು ಕರೆಯು ತ್ತಾರೆ. ಆದರೆ ಸೇಡುತೀರಿಸಿಕೊಂಡ ಅನಂತರ ನಿಜವಾಗಿಯೂ ದ್ವೇಷ ಶುದ್ಧಿ ಯಾಗುವುದೊ ಅಳಿಯುವುದೊ ಇಲ್ಲವೊ ಎಂಬುದನ್ನು ಸ್ಪಷ್ಟಪಡಿಸಬೇಕಾದರೆ ರಕ್ತಕ್ಕೆ ಬದಲಾಗಿ ರಕ್ತ ಎಂಬ ಭಾವನೆಯನ್ನು ಧರ್ಮದ ನೆಲೆಯಲ್ಲಿ ತೆಗೆದು

ಕೊಂಡಿರುವ ಎರಡು ಬುಡಕಟ್ಟುಗಳನ್ನು ಉದಾಹರಣೆಯಾಗಿ ತೆಗೆದುಕೊಳ್ಳ ಬಹುದು.

ಒಂದು ಬುಡಕಟ್ಟಿನವರು ಅಕಸ್ಮಾತ್ತಾಗಿ ತಪ್ಪಿನಿಂದ ಇನ್ನೊಂದು ಬುಡ ಕಟ್ಟಿನ ಒಬ್ಬ ಸದಸ್ಯನನ್ನು ಕೊಲ್ಲುತ್ತಾರೆನ್ನಿ. ಆಗ ಆ ಇನ್ನೊಂದು ಬುಡಕಟ್ಟಿ ನವರು ತಪ್ಪಿನ ಆಳಕ್ಕೆ ಇಳಿದು ವಿವೇಚಿಸುವ ಗೋಜಿಗೆ ಹೋಗುವುದಿಲ್ಲ. ಅದಕ್ಕೆ ಎದುರಾಗಿ ಒಬ್ಬರ ಬದಲಿಗೆ ಆ ಎದುರಾಳಿ ಬುಡಕಟ್ಟಿನ ಇಬ್ಬರು ಸದಸ್ಯರನ್ನು ಕೊಂದುಹಾಕುತ್ತಾರೆ. ಇದರಿಂದ ವೈರಶುದ್ಧಿಯಾಯಿತೆ ? ಎರಡನೆಯವರ ದೃಷ್ಟಿಯಲ್ಲಿ ಇದು ಸರಿಯೆ ಆಗಿರಬಹುದು. ಆದರೆ ಮೊದಲನೆಯವರು ಇದಕ್ಕೆ ಪ್ರತಿಯಾಗಿ ಎದುರಾಳಿ ಬಣದ ಮೂರು ಜನರನ್ನು ಬಲಿತೆಗೆದುಕೊಂಡೇ ನಿಟ್ಟು ಸಿರುಬಿಡುವುದು. ಹೀಗೆ ಸೇಡಿನ ಈ ಸರಪಳಿಗೆ ಕೊನೆಯೆಂಬುದಿಲ್ಲ.

ಬೆಂಕಿಯಿಂದ ಬೆಂಕಿ ಎಂದಿಗೂ ತಣಿಯುವುದಿಲ್ಲ. ಅದು ತಣಿಯುವುದಕ್ಕೆ ಬೇಕಾದುದು ನೀರು. ಸೇಡಿನ ಬೆಂಕಿ ಆರಬೇಕಾದರೆ ಕ್ಷಮಾರೂಪಿಯಾದ ನೀರು ತುಂಬ ಅಗತ್ಯ.

ಕ್ಷಮೆ ತಪ್ತವಾದ ಹೃದಯಕ್ಕೆ ಶಾಂತಿಯನ್ನೆರೆಯುತ್ತದೆ. ಆವೇಶ ಪ್ರಧಾನ ವಾದ ಸೇಡಿನಿಂದ ಬದುಕುಳಿಯಲು ಇದೇ ರಾಜಮಾರ್ಗ. ಈರ್ಷ್ಯಾ ಪ್ರಧಾನ ವಾದ ಸೇಡಿನ ಉರಿಯಿಂದ ಬಚಾವಾಗಬೇಕಾದರೆ ಯಶಸ್ವಿಯಾದ ವ್ಯಕ್ತಿಯ ಗೆಲುವಿನ ಗುಟ್ಟೇನು ಎಂಬುದನ್ನು ವಾಸ್ತವವಾಗಿ ಕಂಡುಕೊಳ್ಳಲು ಪ್ರಯತ್ನಿಸ ಬೇಕು. ಇನ್ನೊಬ್ಬನ ಗೆಲುವೇ ತನ್ನ ಸೋಲಿಗೆ ಕಾರಣವೆಂದು ಲೆಕ್ಕಹಾಕುತ್ತಿದ್ದರೆ ಹೊಟ್ಟೆಕಿಚ್ಚು ಉಂಟಾಗಿ ಮುಯ್ಯಿ ತೀರಿಸಿಕೊಳ್ಳಲು ಮುನ್ನುಗ್ಗುವಂತಾಗುತ್ತದೆ. ಅದಕ್ಕೆ ಬದಲಾಗಿ ಇನ್ನೊಬ್ಬನ ಯಶಸ್ಸಿನ ಮರ್ಮವನ್ನು ಅರಿತುಕೊಂಡು ತನ್ನ ಸೋಲಿಗೆ ಸೂಕ್ತವಾದ ಕಾರಣಗಳನ್ನು ಕಂಡುಕೊಳ್ಳುವ ಪ್ರಯತ್ನಮಾಡಿದರೆ ಪ್ರಾಯಃ ತಿದ್ದಿಕೊಳ್ಳುವ ಅವಕಾಶ ಬಾಗಿಲು ತೆರೆದೀತು.

ಸೇಡಿನಂತಹ ಪ್ರಬಲವಾದ ಮನೋವಿಕೃತಿಗಳಿಂದ ಪೂರ್ತಿಯಾಗಿ ಬಿಡುಗಡೆ ಪಡೆಯುವುದು ಮನುಷ್ಯಮಾತ್ರರ ಪಾಲಿಗೆ ಸಾಧ್ಯವಾಗದ ಮಾತು. ಆದರೆ ಅವುಗಳ ಬಗೆಗೆ ಸೂಕ್ತವಾದ ತಿಳಿವಳಿಕೆಯನ್ನು ಸಂಪಾದಿಸಿಕೊಂಡು ಅವುಗಳನ್ನು ಸರಿಯಾದ ದಾರಿಯಲ್ಲಿ ಉಪಯುಕ್ತವಾಗಿ ಬಳಸಲು ಸಾಧ್ಯವಾದೀತು.

ಈರ್ಷ್ಯಾ ಪ್ರಧಾನವಾದ ಸೇಡಿನ ಪ್ರಯೋಜನವನ್ನು ಹೀಗೆ ಪಡೆದುಕೊಳ್ಳ ಬಹುದು. ಎದುರಾಳಿಯನ್ನು (?) ಕಂಡು ಕರುಬುವ ಬದಲು ಸೇಡು (?) ತೀರಿಸಿಕೊಳ್ಳುವವನು ತನ್ನ ಪ್ರತಿಭೆಯನ್ನು ಹೆಚ್ಚಿಸಿಕೊಂಡು ದುಡಿದು ಎದು

ಿಯನ್ನು ಮೀರಿ ಬೆಳೆದು ಮುಯ್ಯಿ ತೀರಿಸಿಕೊಳ್ಳಬೇಕು. ವಿವೇಚನಶೀಲ ರ ಮನುಷ್ಯ ಹೊಟ್ಟೆಕಿಚ್ಚಿನಿಂದ ಹುಟ್ಟುವ ಈ ಬಗೆಯ ಸೇಡಿಗೆ ಸ್ಪರ್ಧೆಯ ಪವನ್ನು ಕೊಡುತ್ತಾನೆ. ಸೇಡು ತೀರಿಸಿಕೊಳ್ಳಬೇಕಾದರೆ ನಮ್ಮಲ್ಲಿರುವ ್ವಂಸಕಾರಿ ಶಕ್ತಿಗಳು ಜಾಗೃತವಾಗುತ್ತವೆಯಾದರೆ ಸ್ಪರ್ಧೆಗಿಳಿಯುವ ಕಾಲದಲ್ಲಿ ೇ ನಿರ್ಮಾಣಕಾರಿ ಶಕ್ತಿಗಳಾಗಿ ಕಾರ್ಯೋನ್ಮುಖವಾಗುತ್ತವೆ. ಸೇಡಿನ ಭಾವನೆ ೇಕವನ್ನು ಮೆಟ್ಟಿಹಾಕಿ ತಾನೇ ಸರ್ವಶಕ್ತವಾಗಿಬಿಡುತ್ತದೆ. ಆದರೆ ಸ್ಪರ್ಧೆ ೇಕದ ಬೆಳಕಿನಲ್ಲಿ ಮನುಷ್ಯನಲ್ಲಿ ನಿದ್ರಿಸುತ್ತಿರುವ ಶಕ್ತಿಗಳನ್ನು ಮೇಲೆಬ್ಬಿಸಿ ಯಾಶೀಲವನ್ನಾಗಿ ಮಾಡುತ್ತದೆ. ಸೇಡಿನ ಕಿಚ್ಚಿಗೆ ಒಳಗಾದ ಮನುಷ್ಯ ಬೇರೆ ವರು ಎಳೆದಿರುವ ಗೀಟನ್ನು ಚಿಕ್ಕದು ಮಾಡಬೇಕಾದರೆ ಅದರ ಸ್ವಲ್ಪಭಾಗ ್ನು ಅಳಿಸಿಹಾಕುವತ್ತಲೇ ಯೋಚಿಸುತ್ತಾನೆ. ಆದರೆ ಸ್ಪರ್ಧಾಕಾಂಕ್ಷಿಯಾದ ನುಷ್ಯ ಆ ಗೀಟಿನ ಪಕ್ಕದಲ್ಲಿ ತಾನೊಂದು ಉದ್ದವಾದ ಗೀಟನ್ನು ಎಳೆದು ದಲನೆಯದು ಚಿಕ್ಕದೆಂದು ಸಾಧಿಸಿ ತೋರಬಯಸುತ್ತಾನೆ.

ಸೇಡಿನ ಈ ರಚನಾತ್ಮಕ ಸ್ವರೂಪ ಇವತ್ತಿಗೆ ಹೊಸದೇನಲ್ಲ. ಮಾನವಕುಲ ಕಾಲದಿಂದ ಇವತ್ತಿನವರೆಗೆ ವಿಕಾಸಶೀಲವಾಗಿ ಬೆಳೆದು ಬಂದಿರುವುದನ್ನು ೇಡಿದರೆ ಗೊತ್ತಿದ್ದೊ ಗೊತ್ತಿಲ್ಲದೆಯೊ ಸೇಡಿನ ಈ ರಚನಾತ್ಮಕ ಸ್ವರೂಪದ ೆ ಎಂದಿನಿಂದಲೂ ಆಗುತ್ತಿದೆ ಎಂಬುದಕ್ಕೆ ಸಾಕಷ್ಟು ಪುರಾವೆ ದೊರೆತಂತಾಗು .



"ಈ ಮನೋವಿಜ್ಞಾನಿ ಎಂದರೇನು ?" ಅವರು ತುಂಬ ಭೋಳೆ ಧ್ವನಿಯಲ್ಲಿ ಕೇಳಿದರು. ನಾನು ಅವರ ಮುಖ ನೋಡುತ್ತಲೇ ಕುಳಿತುಬಿಟ್ಟೆ. ಆ ಮನುಷ್ಯ ಇಪ್ಪತ್ತನೆಯ ಶತಮಾನದ ಗಾಳಿ ಕುಡಿಯುತ್ತಿದ್ದಾರೆ. ಆದರೆ ಅವರಿಗೆ ಮನೋವಿಜ್ಞಾನಿ ಎಂದರೆ ಯಾರೆಂದು ಗೊತ್ತಿಲ್ಲ ! . . .

"ಈ ಸಂಕಲನದಲ್ಲಿರುವ ಪ್ರಬಂಧಗಳು ನಮ್ಮ ಬಗ್ಗೆ ನಾವು ಆಲೋಚಿಸುವ ನಿಟ್ಟಿನಲ್ಲಿ ಪ್ರೇರಣೆ ನೀಡುತ್ತವೆ. ಹಾಗೆ ಆಲೋಚಿಸಿ ನಮ್ಮ ಮಾನಸಿಕ ದೌರ್ಬಲ್ಯಗಳನ್ನು ಅರ್ಥಮಾಡಿಕೊಂಡು ನಮ್ಮನ್ನು ನೋಡಿ ನಾವೇ ಮುಗುಳ್ನಗುವಂತೆ ಅವು ಅವಕಾಶ ಮಾಡಿಕೊಡುತ್ತವೆ. ತೀರ ಕಡಿಮೆಯೆಂದರೂ ನಮ್ಮ ದೌರ್ಬಲ್ಯಗಳನ್ನು ಕುರಿತಂತೆ ಇತರರು ಪರಿಹಾಸ್ಯ ಮಾಡುವುದಕ್ಕಿಂತಲೂ ಇದು ಮೇಲಲ್ಲವೆ !"

ದಯಾನಂದ ವರ್ಮಾ

". . . ಸಂಕಲನದ ಎಲ್ಲ ಪ್ರಬಂಧಗಳೂ ಮನೋವಿಜ್ಞಾನವನ್ನು ಆಧರಿಸಿದವು. ಆದರೆ ಎಲ್ಲೂ ವಿಜ್ಞಾನದ ಭಾರವಿಲ್ಲ. ಇವು ವಿಜ್ಞಾನ ವಿಷಯವಾದ ಪ್ರಬಂಧಗಳೆಂದು ಮೊದಲ ನೋಟಕ್ಕೆ ಅನ್ನಿಸುವುದೂ ಇಲ್ಲ ! ಯೋಚಿಸತೊಡಗಿದಾಗ ಅವುಗಳ ಹಿಂದಿನ ಮನೋವಿಜ್ಞಾನ ಪ್ರಪಂಚದ ವ್ಯಾಪ್ತಿಯೂ, ವಿಶ್ಲೇಷಣೆಯ ಚಾತುರ್ಯವೂ ಕಣ್ಣಿಗೆ ಕಟ್ಟುತ್ತವೆ. ಮನೋದೇಹಿಯಾದ ಮನುಷ್ಯ ತನ್ನ ಮನಸ್ಸಿನ ಕಡೆಗೆ ಗಮನವನ್ನೇ ಕೊಡುವುದಿಲ್ಲ ! ದೇಹದ ಬಗೆಗಿನ ಆಸಕ್ತಿ, ಎಚ್ಚರ ಮನಸ್ಸಿನ ಬಗೆಗೆ ಕಾಣುವುದಿಲ್ಲ . . .

"ಶ್ರೀ ಲಕ್ಷ್ಮೀನಾರಾಯಣ ಅವರು ಅನುವಾದಿಸಿರುವ ಈ ಪ್ರಬಂಧಗಳನ್ನು ಓದಿ ನಾನು ಸಂತೋಷಪಟ್ಟಿದೇನೆ. ನನ್ನ ಸ್ವಭಾವ ಕೆಲವನ್ನು ಕುರಿತು ನಾನೇ ಆಲೋಚಿಸಿದೇನೆ ! ಇವನ್ನು ಓದುವ ಯಾರಿಗಾದರೂ ಇದೇ ಅನುಭವವಾಗುತ್ತದೆಂದು ನಿರೀಕ್ಷಿಸಿದೇನೆ. ಮನೋವಿಜ್ಞಾನದ ಪಠ್ಯಪುಸ್ತಕಗಳನ್ನು ಓದಿ ನಮ್ಮನ್ನು ನಾವು ಪರೀಕ್ಷಿಸಿಕೊಳ್ಳುವುದು ವೈದ್ಯನ ರೀತಿ. ಶಾಸ್ತ್ರೀಯ ಆಧಾರದ ಇಂಥ ಲಘು ಪ್ರಬಂಧಗಳನ್ನು ಓದಿ ಯೋಚಿಸುವುದು ಸ್ನೇಹದ ರೀತಿ. ಮೊದಲನೆಯದು ಹೇಳಿ ಮಾಡಿಸುತ್ತದೆ; ಎರಡನೆಯದು ಹೇಳದೆ ಕಲಿಸುತ್ತದೆ. ಈ ಪ್ರಬಂಧಗಳ ಸ್ವಾರಸ್ಯ ಇರುವುದೇ ಇಲ್ಲಿ. ಇವು ಸುಲಭವಾಗಿ ಓದಿಸಿಕೊಳ್ಳುತ್ತವೆ; ಯೋಚಿಸುವಂತೆ ಮಾಡುತ್ತವೆ. ಬರವಣಿಗೆಯ ಸಾರ್ಥಕತೆಗೆ ಇನ್ನೇನು ಬೇಕು ?"

ಹಾ ಮಾ ನಾಯಕ

**ರೂ. 12**

---

ವರ್ಗೀಕರಣ : ಡೂಯಿ ದಶಮಾನ 137
ದ್ವಿಬಿಂದು S : 78 33N87